# ಸಿರಾದ ನವಾಬರು

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್.ನಿಬಂಧ)


ಸಂಶೋಧನಾ ವಿದ್ಯಾರ್ಥಿ

ಡಿ.ಮಂಜುನಾಥಸ್ವಾಮಿ

ಮಾರ್ಗದರ್ಶಕರು

ಡಾ. ಸಿ.ಆರ್.ಗೋವಿಂದರಾಜು

[illegible]





ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ [illegible]



[illegible]

# ಸಿರಾದ ನವಾಬರು

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್.ನಿಬಂಧ)


ಸಂಶೋಧನಾ ವಿದ್ಯಾರ್ಥಿ

ಡಿ.ಮಂಜುನಾಥಸ್ವಾಮಿ





ಮಾರ್ಗದರ್ಶಕರು

ಡಾ. ಸಿ.ಆರ್.ಗೋವಿಂದರಾಜು

ಪ್ರಾಧ್ಯಾಪಕರು






ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



೨೦೦೬-೦೭

# ಮಾರ್ಗದರ್ಶಕರ ಪ್ರಮಾಣಪತ್ರ

**"ಶಿರಾದ ನವಾಬರು"** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಡಿ.ಮಂಜುನಾಥಸ್ವಾಮಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

(ಡಾ. ಸಿ.ಆರ್. ಗೋವಿಂದರಾಜು)
ಪ್ರಾಧ್ಯಾಪಕರು
ಚರಿತ್ರೆ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : ...2.02

# ಪ್ರಮಾಣ ಪತ್ರ

**"ಸಿರಾದ ನವಾಬರು"** ಎಂಬ ನಿಬಂಧವನ್ನು ಡಾ. ಸಿ.ಆರ್.ಗೋವಿಂದರಾಜು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಡಿ. ಮಂಜುನಾಥಸ್ವಾಮಿ)
ಸಂಶೋಧನಾ ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೮-೦೨-೦೨

## ಕೃತಜ್ಞತೆಗಳು

**"ಸಿರಾದ ನವಾಬರು"** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಪದವಿಗಾಗಿ ಒಪ್ಪಿಸಲು ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಮಾನ್ಯಕುಲಪತಿಗಳಾದ ಡಾ.ಬಿ.ಎ.ವಿವೇಕ ರೈ ಮತ್ತು ಇಂದಿನ ಪ್ರಭಾರ ಕುಲಪತಿಗಳಾದ ಡಾ.ಕೆ.ವಿ.ನಾರಾಯಣ, ಮಾನ್ಯ ಕುಲಸಚಿವರಾದ ವಿ.ಶಂಕರ್, ಅಧ್ಯಯನಾಂಗದ ನಿರ್ದೇಶಕರಾದ ಡಾ.ಟಿ.ಆರ್.ಚಂದ್ರಶೇಖರ ಹಾಗೂ ಚರಿತ್ರೆ ವಿಭಾಗದ ಮುಖ್ಯಸ್ಥರಾದ ಡಾ.ಕೆ.ಮೋಹನ್‌ಕೃಷ್ಣ ರೈ ಅವರಿಗೆ,

ಅಧ್ಯಯನ ಕೈಗೊಳ್ಳಲು ನನಗೆ ನಿಬಂಧದ ವಿಷಯ ಸೂಚಿಸಿ ತಾಳ್ಮೆಯಿಂದ ಮಾರ್ಗದರ್ಶನ ನೀಡಿದ ಡಾ.ಸಿ.ಆರ್.ಗೋವಿಂದರಾಜು ಹಾಗೂ ಅಧ್ಯಯನದ ವಿವಿಧ ಮಜಲುಗಳನ್ನು ಬೋಧಿಸಿದ ಪ್ರೊ.ಲಕ್ಷ್ಮಣ್ ತೆಲಗಾವಿ, ಪ್ರೊ.ಟಿ.ಪಿ.ವಿಜಯ್, ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರಿಗೆ,

ಈ ಅಧ್ಯಯನಕ್ಕೆ ಪ್ರೋತ್ಸಾಹವನ್ನು ನೀಡಿದ ಡಾ.ಎಸ್.ಷಡಕ್ಷರಯ್ಯ, ಡಾ.ಎಸ್.ಚಂದ್ರಶೇಖರ್, ಡಾ.ಎಂ.ಜಮುನಾ, ಡಾ.ಎಸ್.ನಾಗರತ್ನಮ್ಮ, ಡಾ.ಡಿ.ನ್.ಯೋಗೀಶ್ವರಪ್ಪ, ಡಾ.ಕೆ.ಎಲ್.ಎನ್.ಮೂರ್ತಿ, ಡಾ.ವೀರೇಶ್ ಬಡಿಗೇರ ಮತ್ತು ಕ್ಷೇತ್ರಕಾರ್ಯದಲ್ಲಿ ಸಹಕರಿಸಿ ಸೂಕ್ತ ಮಾಹಿತಿಗಳನ್ನು ಒದಗಿಸಿಕೊಟ್ಟ ಕಣಜನಹಳ್ಳಿ ಶ್ರೀಧರ್, ಎಸ್.ಆರ್.ರಮೇಶ್(ವೈದ್ಯರು), ಚಾಂದ್ ಪಾಷಾ, ಹಜರತ್ ನಯಾಜ್ ಸಾಹೇಬ್, ಎಚ್.ಬಿ.ಕುಮಾರಸ್ವಾಮಿ, ವನರಾಜಯ್ಯ ಅವರಿಗೆ,

ಅಧ್ಯಯನದ ಅವಧಿಯಲ್ಲಿ ಸಹಕರಿಸಿದ ಕೆ.ಎಸ್.ವಿಶ್ವನಾಥ್, ಮಹಾಬಲೇಶ್, ಮಲ್ಲಿಕಾರ್ಜುನ, ಟಿ.ಎಂ.ಚಂದ್ರಶೇಖರ್, ಸಿ.ಜಿ.ಶಿವಕುಮಾರ, ಟಿ.ಶಶಿಧರ, ವೀರೇಶ ಉತ್ತಂಗಿ, ಹಣಮಂತ್ರಾಯ ದೊಡ್ಡಮನಿ, ಹೋಳಿ ಬಸಪ್ಪ, ರಾ.ನ.ನಿರಂಜನ, ರೇಣುಕಾ ಪ್ರಸಾದ್, ಶೇಖರಾಚಾರಿ ಕೊಗಳಿ ಮತ್ತು ಹಿರಿಯ ಹಾಗೂ ಕಿರಿಯ ಸಂಶೋಧನಾ ವಿದ್ಯಾರ್ಥಿಗಳಿಗೆ,

ಗ್ರಂಥಾಲಯದಿಂದ ಪುಸ್ತಕಗಳನ್ನು ಒದಗಿಸಿಕೊಟ್ಟ ಡಾ.ರಾಧಾಕೃಷ್ಣ, ಡಾ.ಎಚ್.ನಾಗವೇಣಿ, ಎಂ.ನಾಗರಾಜನಾಯಕ್, ಕೆ.ಗಣೇಶ್, ಶಿವ, ಎಫ್.ಡಿ.ನದಾಫ್ ಹಾಗೂ ಚರಿತ್ರೆ ವಿಭಾಗದ ಆಡಳಿತ ಸಿಬ್ಬಂದಿ ಗಳಾದ ಸೋಮಶೇಖರ ಕಣವಿ, ವೀರೇಶ, ಗಂಗಾಧರ, ನನ್ನೂರಿನ ಗೆಳೆಯರಾದ ಡಿ.ಸಿ.ಹೇಮಂತ್ ದೊರೆ, ಶಶಿ, ಪ್ರಸಾದ್, ಈಶಣ್ಣ ಅವರಿಗೆ,

ಸದಾ ಕೆಲಸಗಳ ನಡುವೆ ಮಗನ ಏಳ್ಗೆಯನ್ನು ಬಯಸುವ ಹಾಗೂ ಅಧ್ಯಯನಕ್ಕೆ ಪ್ರೋತ್ಸಾಹ ನೀಡಿದ ಪೂಜ್ಯ ತಂದೆ ತಾಯಿಗಳಾದ ಬಿ.ದುಂಡೇಗೌಡ(ನಿವೃತ್ತ ಶಿಕ್ಷಕರು) ಮತ್ತು ಚಂದ್ರಮ್ಮ, ಅಣ್ಣ ಮತ್ತು ಅತ್ತಿಗೆಯಾದ ಡಿ.ಶಿವಗಂಗಾಧರಸ್ವಾಮಿ(ಶಿಕ್ಷಕರು), ಎ.ಎಂ.ಗಾಯತ್ರಮ್ಮ, ಅಕ್ಕ ಭಾವರಾದ ಡಿ.ಚಂದ್ರಕಲಾ ಮತ್ತು ಶಿವಪ್ರಸಾದ್, ಪುಟಾಣಿಗಳಾದ ಕಿರಣ್, ಗಗನ್, ಯಶಸ್, ಮನು ಅವರಿಗೆ,

ಸದಾ ನನ್ನ ಏಳ್ಗೆಯನ್ನು ಬಯಸಿ ಅಧ್ಯಯನಕ್ಕೆ ಸ್ಫೂರ್ತಿ ಹಾಗೂ ಪ್ರೋತ್ಸಾಹ ನೀಡಿದ ನನ್ನ ಬಾಳಗೆಳತಿ ಹೊನ್ನಾಂಬಿಕಾ(ಸುಮತಿ) ಅವರಿಗೆ,

ಅಕ್ಕರೆಯಿಂದ ಅಕ್ಷರ ಸಂಯೋಜನೆ ಮಾಡಿಕೊಟ್ಟ ಶ್ರೀಮತಿ ಬಿ.ರಶ್ಮಿ ಅವರಿಗೆ

ಕೃತಜ್ಞತೆಗಳು

ಡಿ. ಮಂಜುನಾಥಸ್ವಾಮಿ

# ಪರಿವಿಡಿ

## ಅಧ್ಯಾಯ-೧

# ಅಧ್ಯಯನದ ಮಹತ್ವ-ಉದ್ದೇಶ-ವ್ಯಾಪ್ತಿ-ಮಿತಿಗಳು ವಿಧಿ-ವಿಧಾನ ಹಾಗೂ ಸ್ವರೂಪ

### ೧.೧. ಮಹತ್ವ

ದಕ್ಷಿಣ ಭಾರತದ ಚರಿತ್ರೆಯಲ್ಲಿ ವಿಜಯನಗರ ಸಾಮ್ರಾಜ್ಯದ ಪತನದ ನಂತರ ವಿಭಿನ್ನ ಬಗೆಯ ರಾಜಕೀಯ ಸ್ಥಿತ್ಯಂತರಗಳುಂಟಾದವು. ಷಾಹಿ ಸುಲ್ತಾನರು ತಾಳಿಕೋಟೆ ಯುದ್ಧದ ಗೆಲುವಿನೊಂದಿಗೆ ವಿಜಯನಗರದ ಅರಸರ ಭೂ ಪ್ರದೇಶಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡರು. ಈ ಪ್ರಕ್ರಿಯೆಯಲ್ಲಿ ಕನ್ನಡ ಭೂ ಪ್ರದೇಶಗಳು ಮೂರು ವಿಭಾಗಗಳಲ್ಲಿ ವಿಂಗಡಣೆಯಾದವು. ಮಧ್ಯದ ಹಾಗೂ ದಕ್ಷಿಣ ಕರ್ನಾಟಕದ ಪ್ರದೇಶಗಳು ಒಂದು ಭಾಗವಾದರೆ, ಇನ್ನುಳಿದ ಎರಡು ಭಾಗಗಳು ಪೂರ್ವ ಕರಾವಳಿ ಹಾಗೂ ಮಲಬಾರ್ (ಕೆನರಾ) ಪ್ರದೇಶ. ಈ ಮಧ್ಯದ ಕರ್ನಾಟಕದಲ್ಲಿ ತುಮಕೂರಿನ ಸಿರಾ ಪ್ರದೇಶವೂ ಒಂದು. ಬಿಜಾಪುರದ ಷಾಹಿ ಸುಲ್ತಾನರು ಸಿರಾವನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರು. ನಂತರ ಮಲ್ಲಿಕ್ ರಿಹಾನ್‌ನನು ಕೆಲವು ವರ್ಷಗಳ ಕಾಲ ಸಿರಾದಲ್ಲಿ ಆಳ್ವಿಕೆ ನಡೆಸಿದನು. ಬಿಜಾಪುರದ ಷಾಹಿ ಸುಲ್ತಾನರಿಗೂ ಮತ್ತು ಮೊಗಲರಿಗೂ ಘರ್ಷಣೆಗಳು ನಡೆದವು. ಇದರಿಂದಾಗಿ 'ಸಿರಾ' ಭೂ ಪ್ರದೇಶ ಮೊಗಲರ ಅಧೀನಕ್ಕೆ ಬಂದಿತು. ಮೊಗಲ್ ಚಕ್ರವರ್ತಿ ಔರಂಗಜೇಬನ ಆಳ್ವಿಕೆಯ ಕಾಲದಲ್ಲಿ ಸಿರಾದ ಸುಬೇದಾರರಾಗಿ ಖಾಸಿಂಖಾನ್, ಜುಲ್ಫಿಕರ್‌ಖಾನ್, ಫಡದುಲ್ಲಾಖಾನ್, ಮತ್ತು ದಿಲಾವರ್ ಖಾನ್ ಎಂಬುವರು ಆಳ್ವಿಕೆ ನಡೆಸಿದರು. ಇವರಲ್ಲಿ ದಿಲಾವರ್ ಖಾನ್ ಎಂಬುವನು ಸಿರಾದ ನವಾಬರಲ್ಲೇ ಪ್ರಮುಖನಾಗಿದ್ದು, ಈತನ ಕಾಲದಲ್ಲಿ ಸಿರಾ ಪ್ರದೇಶ ಅಭಿವೃದ್ಧಿಯತ್ತ ಸಾಗಿತ್ತು. ಹೀಗಾಗಿ ನವಾಬರ ನೇತೃತ್ವದ ಆಡಳಿತ ಹಾಗೂ ಅನಂತರದ ಚರಿತ್ರೆ ನಾಡಿನ ಇತಿಹಾಸದ ಪುಟಗಳಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಸಿರಾ ಪ್ರದೇಶವನ್ನು ಆಳಿದ ನವಾಬರ ಚರಿತ್ರೆ ಈ ಹೊತ್ತಿಗೂ ಅಲಕ್ಷ್ಯಕ್ಕೆ ಒಳಗಾದಂಥ ಚರಿತ್ರೆಯಾಗಿ ಅನಾವರಣಗೊಂಡಿದೆ. ಈ ಕ್ಷೇತ್ರದಲ್ಲಿ ಒಂದೆರೆಡು ಅಧ್ಯಯನಗಳಾಗಿವೆಯಾದರೂ ಇನ್ನಷ್ಟು ಸಮಗ್ರವಾಗಿ ಪರಿಶೀಲಿಸುವ ಜರೂರು ಇತ್ತು. ಅಂಥ ಪ್ರಯತ್ನವೇ ಈ ಅಧ್ಯಯನ.

### ೧.೨. ಉದ್ದೇಶ, ವ್ಯಾಪ್ತಿ ಹಾಗೂ ಮಿತಿಗಳು

ಪ್ರಸ್ತುತ ಅಧ್ಯಯನವು ಪ್ರಾದೇಶಿಕ ಚರಿತ್ರೆಗೆ ಸೇರುವಂಥದ್ದು. ಸಿರಾ ಪ್ರದೇಶದ ನವಾಬರ ರಾಜಕೀಯ ಇತಿಹಾಸ, ಆಡಳಿತ ವೈಖರಿ ಹಾಗೂ ಕಟ್ಟಿಸಿದ ಸ್ಮಾರಕಗಳನ್ನು ಕುರಿತ ಚಾರಿತ್ರಿಕ ಅಂಶಗಳನ್ನು

ಗುರುತಿಸುವ ಹಾಗೂ ವಿಶ್ಲೇಷಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಪ್ರಸ್ತುತ ಅಧ್ಯಯನವು ಸಿರಾದ ನವಾಬರನ್ನು ಕೇಂದ್ರೀಕರಿಸಿದ್ದು, ವಿಷಯ ಸಂಗ್ರಹಣೆಯನ್ನು ಕ್ಷೇತ್ರಕಾರ್ಯದ ಮೂಲಕ ದೊರೆತ ಆಕರಗಳಿಂದ ಇಲ್ಲಿನ ಚರಿತ್ರೆ, ಸಂಸ್ಕೃತಿಯನ್ನು ಪರಿಶೀಲಿಸುವ ಮಿತಿಗೆ ಒಳಪಡಿಸಿಕೊಂಡಿದೆ. ಕರ್ನಾಟಕ-ಬಿಜಾಪುರ-ಬಲ್ಗಾಟ್‌ಗಳಲ್ಲಿ ಆಯಕಟ್ಟಿನ ಪ್ರದೇಶವಾದ ಸಿರಾದಲ್ಲಿ ಕ್ರಿ.ಶ.೧೬೩೭ ರಿಂದ ೧೭೫೭ರವರೆಗೆ ನವಾಬರು ಆಳ್ವಿಕೆ ನಡೆಸಿದರು. ಹೀಗೆ ಸಿರಾದ ನವಾಬರ ವ್ಯಾಪ್ತಿಗೆ ಬರುವ ಎಲ್ಲ ಅಂಶಗಳಿಗೂ ಪ್ರಸ್ತುತ ಅಧ್ಯಯನವನ್ನು ಸೀಮಿತಗೊಳಿಸಿಕೊಳ್ಳಲಾಗಿದೆ.

ತುಮಕೂರು ಜಿಲ್ಲೆಯು ಹತ್ತು ತಾಲ್ಲೂಕುಗಳನ್ನು ಒಳಗೊಂಡಿದೆ. ಅದರಲ್ಲಿ ಒಂದಾದ ಸಿರಾವು ಕರ್ನಾಟಕದಲ್ಲಿ ಆಯಕಟ್ಟಿನ ಪ್ರದೇಶದಲ್ಲಿದ್ದು, ೪೦೦ ವರುಷಗಳ ಇತಿಹಾಸವನ್ನು ಹೊಂದಿದೆ. ಇದು ಮೊದಲು ರತ್ನಗಿರಿ ಪಾಳೆಯಗಾರರ ಅಧೀನದಲ್ಲಿತ್ತು. ಅನಂತರ ತಾಳಿಕೋಟೆ ಯುದ್ಧದ ತರುವಾಯ ಆದಿಲ್‌ಷಾಹಿಗಳ ಅಧೀನಕ್ಕೆ ಬಂದಿತು. ವಿಜಯನಗರ ಸಾಮ್ರಾಜ್ಯದ ಪತನಾನಂತರ ಏಳಿಗೆಗೆ ಬಂದ ಪಾಳೆಯಗಾರರನ್ನು ಲೆಕ್ಕಿಸದೆ ತಮ್ಮ ಸಾಮ್ರಾಜ್ಯ ವಿಸ್ತರಣೆಗೋಸ್ಕರ ಷಾಹಿ ಸುಲ್ತಾನರು ಸಿರಾದ ಕಡೆಗೆ ತಮ್ಮ ಗಮನ ಹರಿಸಿ ಆಳ್ವಿಕೆ ನಡೆಸಿದರು. ನಂತರ ಮೊಗಲರ ಔರಂಗಜೇಬನು ದಕ್ಷಿಣ ಭಾರತದ ಮೇಲೆ ದಾಳಿ ನಡೆಸಿದಂತಹ ಸಮಯದಲ್ಲಿ ಬಸವಾಪಟ್ಟಣ, ಬೂದಿಹಾಳು, ಬೆಂಗಳೂರು, ಪೆನುಗೊಂಡೆ, ಕೋಲಾರ, ಹೊಸಕೋಟೆ, ಸಿರಾ ಪ್ರದೇಶಗಳನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಂಡನು. ಮೊಗಲರು ಸಿರಾವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡ ಮೇಲೆ ಅಲ್ಲಿ ಖಾಸಿಂಖಾನ್ ಎಂಬುವನನ್ನು ಸುಬೇದಾರನನ್ನಾಗಿ ಮಾಡಿ, ಅನಂತರ ಅವನನ್ನೇ 'ಫೌಜುಧಾರಿ ದಿವಾನ್' ಎಂದು ಕರೆದರು. ಖಾಸಿಂಖಾನನ ನಂತರ ಜುಲ್ಫಿಕರ್‌ಖಾನ್, ಫಡದುಲ್ಲಾಖಾನ್, ದಾವೂದ್ ಖಾನ್, ಅಬ್ದುಲ್ ನಭೀ ತಾಹರ್‌ಖಾನ್ ಹಾಗೂ ದಿಲಾವರ್‌ಖಾನ್ ಮುಂತಾದವರು ನವಾಬರಾಗಿ ಅಧಿಕಾರವಹಿಸಿಕೊಂಡರು. ಆದರೂ ಸಹ ದಿಲಾವರ್‌ಖಾನ್ ಎಂಬುವನು ಈ ನಾಡನ್ನಾಳಿದ ನವಾಬರಲ್ಲೇ ಪ್ರಖ್ಯಾತಿಯಾಗಿದ್ದಾನೆ. ಈತ ಅತ್ಯಂತ ದಕ್ಷನೂ, ಶ್ರೇಷ್ಠನೂ ಆಗಿದ್ದು ಈತನ ಕಾಲದಲ್ಲಿ ರಾಜಕೀಯ ಶಾಂತಿ, ಆರ್ಥಿಕ ಪ್ರಗತಿ ಮತ್ತು ಸಾಂಸ್ಕೃತಿಕ ಬೆಳವಣಿಗೆಗಳಾದವು. ಹೀಗೆ ಸಿರಾವು ಆದಿಲ್‌ಷಾಹಿಗಳು, ಮೊಗಲರು, ಮರಾಠರು, ಮೈಸೂರಿನ ಒಡೆಯರು ಹಾಗೂ ಹೈದರ್-ಟಿಪ್ಪು ಸುಲ್ತಾನರ ಅಧೀನಕ್ಕೆ ಒಳಪಟ್ಟ ಪ್ರದೇಶವಾಗಿದ್ದಿತು. ಇಂತಹ ಐತಿಹಾಸಿಕ ಮಹತ್ವವನ್ನು ಹೊಂದಿದ ಸಿರಾವನ್ನು ಸೀರೆನಾಡು, ಸೀರೆ ಮುನ್ನೂರು, ಸಿರೆಹಸೀಮೆ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಈ ಅಂಶಗಳು ಶಾಸನಗಳಲ್ಲಿ ಉಲ್ಲೇಖಿತವಾಗಿವೆ. ಸಿರಾದ ನವಾಬರ ಇತಿಹಾಸವನ್ನು ಗುರುತಿಸುವ ಕಾರ್ಯದಲ್ಲಿ ಡಿ.ಎನ್.ಯೋಗೀಶ್ವರಪ್ಪನವರು ಖಾಸಿಂಖಾನ್ ಮತ್ತು ದಿಲಾವರ್‌ಖಾನ್ ಮುಂತಾದವರ ಆಡಳಿತ ವೈಖರಿಯ ಬಗ್ಗೆ ತಮ್ಮ ಲೇಖನದಲ್ಲಿ ವಿವರಿಸಿದ್ದಾರೆ. ಅಂತೆಯೇ ಸೈಯದ್ ಅಜಂ ಅವರು ಸಿರಾದ ನವಾಬ ಮಲ್ಲಿಕ್ ರಿಹಾನನ ರಾಜಕೀಯ ಆಡಳಿತ ಕುರಿತ ವಿವರಣೆ ನೀಡಿದ್ದಾರೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಸಿರಾದ ನವಾಬರ ಸಮಗ್ರ ಇತಿಹಾಸ ರಚಿಸುವ ಕಿರು ಪ್ರಯತ್ನವನ್ನು ಮಾಡಲಾಗಿದೆ.

## ೧.೩. ಅಧ್ಯಯನದ ವಿಧಿ-ವಿಧಾನಗಳು

ಪ್ರಸ್ತುತ ಅಧ್ಯಯನವು ಸಮಾಜ ವಿಜ್ಞಾನಗಳ ಚರಿತ್ರೆಯ ಜ್ಞಾನ ಶಾಖೆಗೆ ಸಂಬಂಧಪಟ್ಟದ್ದು. ಸಿರಾ ಪ್ರದೇಶವು ಇಂದು ಸಣ್ಣ ತಾಲ್ಲೂಕು ಕೇಂದ್ರವಾಗಿರುವುದರಿಂದ ಸ್ಥಳೀಯ ಚರಿತ್ರೆಯ ನೆಲೆಯಲ್ಲಿ ಮಹತ್ವದ ಸಂಗತಿಗಳನ್ನು ಹುದುಗಿಸಿಕೊಂಡಿದೆ. ನವಾಬರ ಆಳ್ವಿಕೆಯ ಈ ಪ್ರದೇಶ ಒಂದು ಸಣ್ಣ ಸಂಸ್ಥಾನವಾದರೂ ನಾಡಿನ ಚರಿತ್ರೆಯಲ್ಲಿ ಅಧ್ಯಯನಕ್ಕೆ ಯೋಗ್ಯವಾದುದು. ನಿರ್ಲಕ್ಷ್ಯಕ್ಕೆ ಒಳಪಟ್ಟ ಇಲ್ಲಿಯ ಚರಿತ್ರೆಯ ಸಂಗತಿಗಳನ್ನು ಕ್ಷೇತ್ರಕಾರ್ಯದ ಮುಖೇನ ಅಧ್ಯಯನ ಮಾಡಲಾಗಿದೆ. ಅಲ್ಲದೆ ಪ್ರಕಟಿತ ಹಾಗೂ ಅಪ್ರಕಟಿತ ಆಕರ ಸಾಮಗ್ರಿಗಳ ಮುಖೇನ ಈ ವಿಷಯವನ್ನು ಪರಿಶೀಲಿಸಿದೆ. ಈ ಹಿನ್ನಲೆಯಲ್ಲಿ ಚರಿತ್ರೆಯ ವೈಧಾನಿಕತೆಯನ್ನು ಅಳವಡಿಸಿಕೊಳ್ಳಲಾಗಿದೆ.

## ೧.೪. ಅಧ್ಯಯನದ ಸ್ವರೂಪ

ಮೊದಲನೆಯ ಅಧ್ಯಾಯದಲ್ಲಿ ಸಿರಾದ ನವಾಬರ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಿತಿಗಳು ಮತ್ತು ಅಧ್ಯಯನದ ವಿಧಿ-ವಿಧಾನಗಳ ಬಗ್ಗೆ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಸಿರಾದ ನವಾಬರ ಚಾರಿತ್ರಿಕ ಹಿನ್ನಲೆಯ ಬಗ್ಗೆ ವಿವರಣೆ ನೀಡಲಾಗಿದೆ. ಅಂದರೆ ಪ್ರಸ್ತುತ ಕರ್ನಾಟಕದ ತುಮಕೂರು ಜಿಲ್ಲೆಯ ತಾಲ್ಲೂಕು ಆಡಳಿತ ಕೇಂದ್ರವಾಗಿರುವ ಸಿರಾದ ಭೌಗೋಳಿಕ ಲಕ್ಷಣಗಳ ಬಗ್ಗೆ ವಿವರಿಸಲಾಗಿದೆ. ಶತ-ಶತಮಾನಗಳಿಂದ ಐತಿಹಾಸಿಕ ಸ್ಥಾನಮಾನವನ್ನು ಹೊಂದಿರುವ ಸಿರಾ 'ದೇವಗ'-'ಶಿರಗ' ಎಂಬುವರಿಂದ ಹೇಗೆ ಸ್ಥಾಪಿಸಲ್ಪಟ್ಟಿತು ಎಂಬುದರ ಬಗ್ಗೆ ವಿವರಿಸಲಾಗಿದೆ. ಸಿರಾವನ್ನು ಹಲವು ಶಾಸನಗಳಲ್ಲಿ ಉಲ್ಲೇಖಿಸಿರುವ ಹಾಗೆ ಇದರ ಐತಿಹಾಸಿಕ ಮಹತ್ವವನ್ನು ಗುರುತಿಸಲಾಗಿದೆ. ಗಂಡು ಮೆಟ್ಟಿನ ನಾಡಾದ ಸೀರ್ಯದಲ್ಲಿ ಕಸ್ತೂರಿ ರಂಗಪ್ಪನಾಯಕನು ವಿಜಯನಗರ ಸಾಮ್ರಾಜ್ಯದ ಶ್ರೀರಂಗರಾಯರೊಂದಿಗೆ ಹೊಂದಿದ್ದ ಸಂಬಂಧಗಳ ವಿವರಣೆ ಇಲ್ಲಿದೆ. ತಾಳಿಕೋಟೆಯ ಯುದ್ಧದ ನಂತರ ಬಿಜಾಪುರದ ಆದಿಲ್‌ಷಾಹಿಗಳ ದಳಪತಿ ರಣದುಲ್ಲಾಖಾನನು ಸಿರಾದ ಕೋಟೆಯನ್ನು ವಶಪಡಿಸಿಕೊಂಡ ಬಗೆಯನ್ನು ಜಾನಪದ ಅಂಶಗಳ ಮೂಲಕ ವಿವರಿಸಲಾಗಿದೆ. ಹೀಗೆ ಆಕ್ರಮಣ ಪ್ರವೃತ್ತಿ ಹೊಂದಿದ ಆದಿಲ್‌ಷಾಹಿಗಳು ಕೆಳದಿ, ಮೈಸೂರು, ಬಸವಾಪಟ್ಟಣ, ಹೊಸಕೋಟೆ, ಬೆಂಗಳೂರು, ಕೋಲಾರ, ಬೂದಿಹಾಳು, ಸಿರಾ ಮುಂತಾದ ಪ್ರದೇಶಗಳನ್ನು ವಶಪಡಿಸಿಕೊಂಡು ಆಳ್ವಿಕೆ ನಡೆಸಿದ ಬಗೆಗೆ ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಸಿರಾದಲ್ಲಿ ಆಳ್ವಿಕೆ ನಡೆಸಿದ ನವಾಬರ ಆಳ್ವಿಕೆಯ ವಿಭಿನ್ನ ಹಂತಗಳನ್ನು ವಿವರಿಸಲಾಗಿದೆ. ತಾಳಿಕೋಟೆ ಯುದ್ಧದ ನಂತರ ಬಿಜಾಪುರದ ಆದಿಲ್‌ಷಾಹಿಗಳು ದಕ್ಷಿಣ ಕರ್ನಾಟಕದ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡರು. ಕರ್ನಾಟಕ-ಬಿಜಾಪುರ-ಬಾಲ್ಘಾಟ್ ಪ್ರದೇಶದಲ್ಲಿ ಆಯಕಟ್ಟಿನ ಸ್ಥಾನಮಾನವನ್ನು ಹೊಂದಿದ್ದು ಸಿರಾ. ಕರ್ನಾಟಕದಲ್ಲಿ ಬಿಜಾಪುರ ಸುಲ್ತಾನರ ರಾಜ್ಯವು

ಸೀರ್ಯ(ಸಿರಾ)ದಿಂದ ತುಂಗಭದ್ರಾ ನದಿಯವರೆಗೂ ವಿಸ್ತರಿಸಿದ್ದು, ಬಿಜಾಪುರ ಮಹಮದ್ ಆದಿಲ್‌ಷಾಹನ ಸೇನಾ ದಂಡನಾಯಕನಾದ ರಣದುಲ್ಲಾಖಾನನ ಸಹದಂಡನಾಯಕನಾದ ಮಲ್ಲಿಕ್ ರಿಹಾನನು ಕ್ರಿ.ಶ.೧೬೩೭ ರಿಂದ ೧೬೫೧ರವರೆಗೆ ಆಳ್ವಿಕೆ ನಡೆಸಿದ ಬಗ್ಗೆ ವಿವರಿಸಿದೆ. ಕ್ರಿ.ಶ.೧೬೫೧ರ ನಂತರ ಷಹಜಿ ಮತ್ತು ಆದಿಲ್‌ಷಾಹಿಗಳು ಆಳ್ವಿಕೆ ನಡೆಸಿದರು. ಕ್ರಿ.ಶ.೧೬೮೨ರಲ್ಲಿ ಔರಂಗಜೇಬನು ಬಿಜಾಪುರ ಮತ್ತು ಗೋಲ್ಕಂಡಗಳನ್ನು ಆಕ್ರಮಿಸುವುದೆಂದು ನಿಶ್ಚಯಿಸಿದನು. ಇದಕ್ಕೆ ಪೂರಕವಾಗಿ ೧೬೮೪ರಲ್ಲಿ ಬಿಜಾಪುರ ಸುಲ್ತಾನನಾದ ಸಿಕಂದರ್ ಷಹನು ಔರಂಗಜೇಬನಿಗೆ ಉದ್ರೇಕಗೊಳಿಸುವಂತಹ ಕಾಗದವನ್ನು ಬರೆದಿದ್ದನು. ಹೀಗಾಗಿ ಕ್ರಿ.ಶ.೧೬೮೬ ಸೆಪ್ಟೆಂಬರ್ ೧೩ ರಂದು ಬಿಜಾಪುರದ ಆದಿಲ್‌ಷಾಹಿಗಳಿಗೂ ಮೊಗಲರಿಗೂ ಘರ್ಷಣೆ ನಡೆದು, ವಿಜಯಿಗಳಾದ ಮೊಗಲರು ಸಿರಾದ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದ ಬಗ್ಗೆ ವಿವರಿಸಲಾಗಿದೆ. ಹೀಗೆ ಔರಂಗಜೇಬನು ಬಸವಾಪಟ್ಟಣ, ಬೂದಿಹಾಳು, ಪೆನುಗೊಂಡೆ, ದೊಡ್ಡಬಳ್ಳಾಪುರ, ಹೊಸಕೋಟೆ, ಕೋಲಾರ, ಬೆಂಗಳೂರು ಮತ್ತು ಸೀರ್ಯ(ಸಿರಾ)ವನ್ನೊಳಗೊಂಡ ಪ್ರತ್ಯೇಕವಾದ ರಾಜ್ಯವೊಂದು ರಚಿತವಾಯಿತು. ಈ ನೂತನ ಪ್ರಾಂತ್ಯಕ್ಕೆ ಸಿರಾವು ರಾಜಧಾನಿಯಾಯಿತು. ಖಾಸಿಂಖಾನನು ನೂತನ ಸಿರಾ ಪ್ರಾಂತ್ಯದ ಫೌಜುದಾರ ಅಥವಾ ಮಂಡಲಾಧಿಪತಿಯಾಗಿ ನಿಯುಕ್ತನಾದನು. ಈ ಸಿರಾ ಪ್ರಾಂತ್ಯವು ಕ್ರಿ.ಶ.೧೭೫೭ರವರೆಗೆ ಮೊಗಲರ ಅಧೀನದಲ್ಲಿದ್ದು, ಹೊಂದಿದ ಪ್ರಗತಿಯ ಬಗ್ಗೆ ವಿವರಿಸಲಾಗಿದೆ.

ಖಾಸಿಂಖಾನನು ಬೆಂಗಳೂರು, ಹೊಸಕೋಟೆ, ದೊಡ್ಡಬಳ್ಳಾಪುರಗಳ ಮೇಲೆ ಆಕ್ರಮಣ ನಡೆಸಿ, ಜೊತೆಗೆ ಸುತ್ತಮುತ್ತಲಿನ ಪ್ರಾಂತ್ಯಗಳನ್ನು ತನ್ನ ಅಧೀನಕ್ಕೆ ತೆಗೆದುಕೊಳ್ಳುವಲ್ಲಿ ಯಶಸ್ವಿಯಾದನು. ನಂತರ ಮರಾಠರ ಸಂತಾಜಿ ಘೋರ್ಪಡೆಯೊಂದಿಗೆ ದೊಡ್ಡೇರಿ ಕದನದ ಹೋರಾಟದ ಸಂದರ್ಭದಲ್ಲಿ ಮಡಿದನು. ಇವನ ನಂತರ ಜುಲ್ಫಿಕರ್‌ಖಾನ್ ಸಿರಾದ ನವಾಬನಾಗಿ ಜಿಂಜಿ, ರಾಯಗಢ ಮುಂತಾದವುಗಳನ್ನು ಆಕ್ರಮಿಸುವುದರ ಜೊತೆಗೆ ಚಿತ್ರದುರ್ಗದ ಪರಶುರಾಮಪ್ಪನಾಯಕನೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದನು. ಈತನು 'ರುಸ್ತುಂಬಾದ್' ಎಂಬ ಪೇಟೆಯನ್ನು ಸ್ಥಾಪಿಸಿ ಔರಂಗಜೇಬನಿಂದ 'ಕೈಫಿಯತ್ ಖಾನ್' ಎಂಬ ಬಿರುದಿಗೆ ಪಾತ್ರನಾಗಿದ್ದ ವಿವರಣೆಯನ್ನು ನೀಡಲಾಗಿದೆ.

ನಂತರ ಫಡದುಲ್ಲಾಖಾನ್ ೧೭೦೬ರವರೆಗೆ, ಅಬ್ದುಲ್ ನಭೀ ತಾಹರ್‌ಖಾನ್ ೧೭೨೪-೧೭೪೨ರವರೆಗೆ ಸಿರಾದ ನವಾಬರಾಗಿ ಅಧಿಕಾರ ವಹಿಸಿಕೊಂಡಿದ್ದರು. ನಂತರ ೧೭೪೨ರಲ್ಲಿ ಅಧಿಕಾರಕ್ಕೆ ಬಂದ ದಿಲಾವರ್‌ಖಾನನು ಸಿರಾದ ನವಾಬರಲ್ಲೇ ಪ್ರಮುಖನಾಗಿದ್ದು, ಹಾಗಲವಾಡಿಯ ಮುದ್ದುವೀರಪ್ಪ ನಾಯಕನೊಡನೆ ಹೋರಾಡಿದ ಬಗೆಯನ್ನು ವಿವರಿಸಲಾಗಿದೆ. ಈತನ ಕಾಲದಲ್ಲಿ ಬಸವಾಪಟ್ಟಣವನ್ನು ಅಭಿವೃದ್ಧಿಗೊಳಿಸಿ, ಸಿರಾದಲ್ಲಿ ಒಂದು ಕೆರೆಯನ್ನು ಕಟ್ಟಿಸುವುದರ ಮೂಲಕ, ಕೃಷಿಗೆ ಪ್ರೋತ್ಸಾಹ ನೀಡಿ ದುದರ ಬಗೆಗೆ ವಿವರಿಸಲಾಗಿದೆ. ನಂತರ ಸಿರಾದಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಅಧಿಕಾರಕ್ಕೆ ಬಂದು, ಇವರು ಹೊಸಕೋಟೆ, ಚಿತ್ರದುರ್ಗ, ನಿಡಗಲ್ಲು, ಬಂಕಾಪುರ, ಬಿದನೂರು, ಮಧುಗಿರಿ ಕೋಟೆಗಳನ್ನು ಜಯಿಸಿದ ವಿವರಣೆ ನೀಡಲಾಗಿದೆ. ನಂತರ ೧೭೯೯ರಲ್ಲಿ ಟಿಪ್ಪು ೪ನೆಯ ಮೈಸೂರು

ಯುದ್ಧದಲ್ಲಿ ಹತನಾದಾಗ ಸಿರಾವು ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ರಾಜ್ಯಕ್ಕೆ ಸೇರಿದ ಬಗ್ಗೆ ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕ್ರಿ.ಶ.೧೭ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೆ ಆಳ್ವಿಕೆ ನಡೆಸಿದ ಬಿಜಾಪುರದ ಆದಿಲ್‌ಷಾಹಿಗಳು ಮತ್ತು ಮೊಗಲರು ಸಿರಾದಲ್ಲಿನ ಅಳ್ವಿಕೆಯ ಕಾಲದಲ್ಲಿ ತಮ್ಮ ಕೇಂದ್ರದ ಆಡಳಿತ ಪದ್ಧತಿಯನ್ನೇ ಹೆಚ್ಚಾಗಿ ಅನುಸರಿಸುತ್ತಿದ್ದರು. ಪ್ರಾಂತ್ಯಗಳಲ್ಲಿನ ಸುಬೇದಾರರು ಪ್ರಾಂತ್ಯಗಳ ಮೇಲಿನ ಸಂಪೂರ್ಣ ಜವಾಬ್ದಾರಿಯನ್ನು ಹೊಂದಿದ್ದರು. ಸಾಮಾಜಿಕವಾಗಿ ಹಿಂದೂ-ಮುಸ್ಲಿಮರು ಸಾಮರಸ್ಯ ಹೊಂದಿದ್ದರು. ಇದಕ್ಕೆ ಪ್ರತೀಕವಾಗಿರುವುದು ಮಲ್ಲಿಕ್ ರಿಹಾನ್ ದರ್ಗಾದ ಇಂದಿನ ಧಾರ್ಮಿಕ ಆಚರಣೆಯೇ ಉದಾಹರಣೆ ಆಗಿದೆ. ಹೀಗೆ ಮುಸಲ್ಮಾನರಾದ ಸುಬೇದಾರರು ಹಿಂದೂಗಳ ಬಗ್ಗೆ ಹೊಂದಿದ್ದ ಉದಾರ ಭಾವನೆಯನ್ನು ಇವರ ಆಡಳಿತ ಪದ್ಧತಿಯಿಂದ ಗುರುತಿಸಲಾಗಿದೆ. ನ್ಯಾಯ ಪರಿಪಾಲನೆಯನ್ನು ಮುಸ್ಲಿಮರಿಗೆ ಖುರಾನಿನ ಆಧಾರದ ಮೇಲೂ, ಹಿಂದೂಗಳಿಗೆ ಹಿಂದೂ ಧರ್ಮಶಾಸ್ತ್ರದ ಆಧಾರದ ಮೇಲೂ ನೀಡಲಾಗುತ್ತಿತ್ತು.

ನವಾಬರ ಆಳ್ವಿಕೆಯ ಕಾಲದಲ್ಲಿ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದರು. ಇಸ್ಲಾಂ ಉತ್ಕರ್ಷಕ್ಕೆ ಬರುವ ಮುನ್ನವೇ ದಕ್ಷಿಣ ಭಾರತೀಯರು ಅರಬ್ಬರೊಡನೆ ಸಂಪರ್ಕವನ್ನಿಟ್ಟುಕೊಂಡಿದ್ದರು. ಈ ವೇಳೆಗೆ ಪರ್ಶಿಯಾದ ಚಿತ್ರಗಳು ಬಂದಿದ್ದು, ಸ್ಥಳೀಯ ಕಲಾವಿದರು ದೇಶೀಯ ಶೈಲಿಯೊಂದಿಗೆ ಬೆರೆಸಿ ಭಾರತೀಯ-ಮಹಮದೀಯ (ಇಂಡೋ-ಇಸ್ಲಾಮಿಕ್) ಕಲಾ ಪ್ರಕಾರವೊಂದನ್ನು ಆವಿಷ್ಕರಿಸಿ, ಇಲ್ಲಿ ವಾಸ್ತುಶಿಲ್ಪ ನಿರ್ಮಾಣ ಮಾಡಿದ ಬಗೆ ಗಮನಾರ್ಹ.

ಹಿಂದೂ-ಮುಸ್ಲಿಮರ ಧಾರ್ಮಿಕ ಆಚರಣೆಯ ಪ್ರತೀಕವಾಗಿ ಇಂದಿಗೂ ನಿಂತಿರುವ ಮಲ್ಲಿಕ್ ರಿಹಾನ್ ದರ್ಗಾ ಉಭಯ ಧರ್ಮಗಳ ಭಾವೈಕ್ಯತಾ ನೆಲೆಯಾಗಿದೆ. ಮುಸ್ಲಿಮರ ಧಾರ್ಮಿಕ ಆಚರಣೆಯ ಪ್ರಮುಖ ಸ್ಥಳ ಹಾಗೂ ಪ್ರಾರ್ಥನಾ ಮಂದಿರವೂ ಆದ ಜಾಮಿಯ ಮಸೀದಿಯ ಕಟ್ಟಡದ ರಚನೆ, ಅದರ ಐತಿಹಾಸಿಕ ಮಹತ್ವವನ್ನು ಕುರಿತು ಹೇಳುತ್ತದೆ. ಸಿರಾದಲ್ಲಿ ನವಾಬರು ತಮ್ಮ ಆಳ್ವಿಕೆಯ ಅವಧಿಯಲ್ಲಿ ನಿರ್ಮಿಸಿದ ಪ್ರಮುಖ ಮುಸ್ಲಿಮ್ ವಾಸ್ತುಶಿಲ್ಪ ಸ್ಮಾರಕಗಳಾದ ರಾಗಿ ಕಲ್ಲು ಗೋರಿ, ಚಿನ್ನದ ಗೋರಿ, ಅಹಲ್ ಆದೀಸ್, ಮೊಗಲ್ ಮಸ್ಜೀದ್, ಹೆರಾರ್ ಮಸೀದಿ ಈದ್ಗಾ ಮತ್ತು ಖಾನ್‌ಬಾಗ್ ಉದ್ಯಾನವನಗಳನ್ನು ಸಹ ಉಲ್ಲೇಖಿಸಬಹುದು.

ಸಿರಾದಲ್ಲಿ ಪಾಳೆಯಗಾರರ ಆಳ್ವಿಕೆಯ ಸಂದರ್ಭದಲ್ಲಿ ತಮ್ಮ ಪಾಳೆಯಪಟ್ಟಿನ ಸಂರಕ್ಷಣೆಯ ದೃಷ್ಟಿಯಿಂದ, ಆಗಿನ ಕಾಲದಲ್ಲಿ ಪ್ರಚಲಿತದಲ್ಲಿದ್ದ ತಾಂತ್ರಿಕತೆಯನ್ನು ಬಳಸಿ ನಿರ್ಮಿಸಿದ ಸಿರಾದ ಕೋಟೆಯನ್ನು ಗಮನಿಸಬಹುದು. ಹೀಗೆ ನವಾಬರ ಆಳ್ವಿಕೆಯ ಅವಧಿಯಲ್ಲಿ ಸಿರಾ ಪ್ರದೇಶವು ಹೇಗೆ ಅಭಿವೃದ್ಧಿಯನ್ನು ಹೊಂದಿತ್ತು ಎಂಬುದರ ಬಗ್ಗೆ ವಿವರಣೆ ನೀಡುವ ಪ್ರಯತ್ನ ಮಾಡಲಾಗಿದೆ. ಅಂತೆಯೇ ಕೊನೆಯ ಅಧ್ಯಾಯವಾದ ಐದರಲ್ಲಿ ಪ್ರಸ್ತುತ ಅಧ್ಯಯನದಿಂದ ತಳೆದ ನಿಲುವುಗಳನ್ನು ಅಭಿವ್ಯಕ್ತಿಸಲಾಗಿದೆ.

ಅಧ್ಯಾಯ-೨

# ಸಿರಾದ ನವಾಬರ ಚಾರಿತ್ರಿಕ ಹಿನ್ನೆಲೆ

೨.೧. ಸಿರಾದ ಮೂಲ

೨.೨. ಸಿರಾದ ಐತಿಹಾಸಿಕ ಹಿನ್ನೆಲೆ

೨.೩. ಸಿರಾದ ನವಾಬರ ಹಿನ್ನೆಲೆ

೨.೪. ಪ್ರಾರಂಭಿಕ ಆಕ್ರಮಣಗಳು

# ಅಧ್ಯಾಯ-೨

# ಸಿರಾದ ನವಾಬರ ಚಾರಿತ್ರಿಕ ಹಿನ್ನೆಲೆ

ಕರ್ನಾಟಕದ ತುಮಕೂರು ಜಿಲ್ಲೆಯ ತಾಲ್ಲೂಕು ಆಡಳಿತ ಕೇಂದ್ರ ಸಿರಾ. ಇದು ರಾಷ್ಟ್ರೀಯ ಹೆದ್ದಾರಿ ೪ರಲ್ಲಿ ಬೆಂಗಳೂರಿನಿಂದ ೧೨೦ಕಿ.ಮೀ ಮತ್ತು ತುಮಕೂರಿನಿಂದ ೫೦ ಕಿ.ಮೀ.ದೂರದಲ್ಲಿದೆ. ಸಿರಾದ ಪೂರ್ವಕ್ಕೆ ಮಧುಗಿರಿ ಮತ್ತು ಕೊರಟಗೆರೆ ತಾಲ್ಲೂಕುಗಳು, ಈಶಾನ್ಯಕ್ಕೆ ಆಂಧ್ರಪ್ರದೇಶ, ಆಗ್ನೇಯದಲ್ಲಿ ತುಮಕೂರು ತಾಲ್ಲೂಕು, ದಕ್ಷಿಣಕ್ಕೆ ಗುಬ್ಬಿ, ನೈರುತ್ಯಕ್ಕೆ ಚಿಕ್ಕನಾಯಕನಹಳ್ಳಿ ತಾಲ್ಲೂಕು, ಪಶ್ಚಿಮ ಮತ್ತು ವಾಯುವ್ಯಕ್ಕೆ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕುಗಳಿವೆ. ಕಳ್ಳಂಬೆಳ್ಳ, ಹುಲಿಕುಂಟೆ, ಗೌಡನಗೆರೆ, ಬುಕ್ಕಾಪಟ್ಟಣ, ಸಿರಾ ಕಸಬಾ ಇಲ್ಲಿಯ ಹೋಬಳಿಗಳು. ಸಿರಾ ಸುಮಾರು ೧.೫೪೦ ಚ.ಕಿ.ಮೀ ವಿಸ್ತೀರ್ಣ ಹೊಂದಿರುವ ಭೂ ಪ್ರದೇಶ.

ಸುವರ್ಣಮುಖಿ ಈ ತಾಲ್ಲೂಕಿನ ಮುಖ್ಯ ನದಿ. ಇಲ್ಲಿನ ಕೆಂಪು ಮತ್ತು ಕಪ್ಪು ಮಿಶ್ರಿತ ಭೂಮಿ ವ್ಯವಸಾಯಕ್ಕೆ ಯೋಗ್ಯವಾಗಿದೆ. ಇಲ್ಲಿ ಹೊಗೆಸೊಪ್ಪು, ಹತ್ತಿ, ರಾಗಿ, ಜೋಳ, ಭತ್ತ, ಅವರೆ, ಹುರುಳಿ, ತೆಂಗು ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಕಳ್ಳಂಬೆಳ್ಳ, ಎಲಿಯೂರು, ಲಕ್ಷ್ಮೀಸಾಗರ, ಚಿಕ್ಕಸಂದ್ರ, ಬ್ರಹ್ಮಸಂದ್ರ, ಬೋರಸಂದ್ರ, ಮಾಗೋಡು, ದೊಡ್ಡ ಅಗ್ರಹಾರ, ಭೂಪಸಂದ್ರ, ಚಂಗಾವರ ಸಿರಾ, ರಾಮಲಿಂಗಪುರ, ಬುಕ್ಕಾಪಟ್ಟಣ ಮುಂತಾದ ಕಡೆ ದೊಡ್ಡ ಕೆರೆಗಳಿವೆ. ಈ ತಾಲ್ಲೂಕಿನ ಅರಣ್ಯದಲ್ಲಿ ಜಾಲಿ, ದಿಂಡಿಗ, ಹೊನ್ನೆ, ಕರಿಮತ್ತಿ, ಅಳಲೆ ಮತ್ತು ಗಂಧದ ಮರಗಳನ್ನು ಮತ್ತು ಕೆಲವು ಪ್ರದೇಶಗಳಲ್ಲಿ ಕುರುಚಲು ಗಿಡಗಳನ್ನೂ ಕಾಣಬಹುದು. ಇಲ್ಲಿ ಸಹಾಯಕ ಉದ್ಯಮಗಳು, ಶಾಲಾ ಕಾಲೇಜುಗಳು, ಆರೋಗ್ಯ ಕೇಂದ್ರಗಳು, ಔಷಧಾಲಯಗಳು ಇನ್ನೂ ಮುಂತಾದ ಸೌಕರ್ಯಗಳಿವೆ.

ಸೀಬಿ ಈ ತಾಲ್ಲೂಕಿನ ಒಂದು ಪ್ರೇಕ್ಷಣೀಯ ಸ್ಥಳ. ಇಲ್ಲಿ ಪ್ರಸಿದ್ಧವಾದ ನರಸಿಂಹಸ್ವಾಮಿಯ ದೇವಾಲಯವಿದೆ. ಈ ತಾಲ್ಲೂಕಿನ ತಾವರೆಕೆರೆಯ ಬಂಡಿ ರಂಗನಾಥಸ್ವಾಮಿ ಮತ್ತು ಪಟ್ಟನಾಯಕನ ಹಳ್ಳಿಯ ಗಂಗ ಬ್ರಹ್ಮೇಶ್ವರ ಸ್ವಾಮಿ ಜಾತ್ರೆಗಳನ್ನು ಪ್ರತಿವರ್ಷವೂ ಆಚರಣೆ ಮಾಡಲಾಗುತ್ತದೆ.[೧]

## ೨.೧. ಸಿರಾದ ಮೂಲ

'ಸಿರಾ' ಎಂಬ ಪ್ರದೇಶವು ಶತ-ಶತಮಾನಗಳ ಐತಿಹಾಸಿಕ ಸ್ಥಾನಮಾನ ಹೊಂದಿದೆ. ರಾಜ ಮಹಾರಾಜರು, ವೀರ ಯೋಧರು, ಸಾಧು ಸಂತರು, ಸಾಂಸ್ಕೃತಿಕ ನಾಯಕರು ಆಳಿ ಅಮರವಾದ ಹಿರಿಮೆ

ಸಿರಾ ತಾಲ್ಲೂಕಿಗಿದೆ. ದೇವಗ-ಶಿರಗ ಎಂಬುವರು ಈ ಸ್ಥಳವನ್ನು ತೆಗೆದುಕೊಂಡು ತಮ್ಮ ಇಷ್ಟದಂತೆ ಅಲ್ಲಿ 'ಸಿರಾ' ಎಂಬ ಊರನ್ನು ಸ್ಥಾಪಿಸಿದರು. ಇಲ್ಲಿ ಬರುವ 'ದೇವಗ-ಶಿರಗ' ಎಂಬ ಗೊಲ್ಲರ ಕಥೆ ಕಟ್ಟುಕಥೆಯಾಗಿಯೂ ಇರಬಹುದು. ಏಕೆಂದರೆ ಶಿರಾ>ಸಿರಾ>ಸೀರ್ಯ>ಸಿವಿರಯ ಎಂದು ಈ ಪದದ ವ್ಯುತ್ಪತ್ತಿಯನ್ನು ಕಾಣಬಹುದು. ಈ ನಗರ ಶಾತವಾಹನರ ಹಾಗೂ ಪಲ್ಲವರ ಕಾಲದಲ್ಲಿ ಅವರ ದಂಡಿನ ಶಿಬಿರವಾಗಿದ್ದಿತು. ಸಂಸ್ಕೃತದಲ್ಲಿ ಶಿಬಿರಕಂ>ಶಿವಿರಯಂ>ಸೀರ್ಯ ಎಂದು, ಪ್ರಾಕೃತದಲ್ಲಿ ಶಿರಾ ಎಂಬ ರೂಪವನ್ನು ತಳೆದಿದೆ. ಇಂಥ ಸೀರ್ಯಗಳು ಹಲವಾರು. ಅವೆಂದರೆ ಕೊತ್ತಶಿವಿರಂ, ಮಡಕ ಸೀರ್ಯ, ದಂಡಿನ ಶಿಬಿರ, ದೇವನ ಸೀರ್ಯ ಇತ್ಯಾದಿ. ಹಿರೇ ಒಡೆಯನ ಸಂತತಿಯವರು ಕಟ್ಟಿಸಿದ ಸೀರ್ಯಕ್ಕೆ ದೇವಣ ಸೀರ್ಯ, ದೇವಣ ಸಿರೆಹ ಎಂದು ಹೆಸರಿಸಲಾಗಿದೆ ಎಂದು 'ಚಿತ್ರದುರ್ಗದ ಗಜಕೇಸರಿ' ಗ್ರಂಥದಲ್ಲಿ ವಿವರಣೆ ನೀಡಿದೆ. ಈ ಪ್ರದೇಶದಲ್ಲಿ ದಂಡಿನಶಿಬಿರವನ್ನು ಹೂಡಿದ್ದ ಪಲ್ಲವ ಅಥವಾ ನೊಳಂಬ ರಾಜನ ಹೆಸರಿನ ಕೊನೆಯಲ್ಲಿ 'ದೇವ' ಎಂಬ ಪದವಿದ್ದಿರಬಹುದಾದ್ದರಿಂದ 'ದೇವನ ಶಿವಿರ' ಎಂಬ ಅರ್ಥದಲ್ಲಿ ಇದು ದೇವಣ ಸೀರ್ಯವಾಗಿದೆ[೭] ಎಂದು ಎಂ.ವಿ.ಚಿತ್ರಲಿಂಗಯ್ಯನವರು ಹೇಳಿದ್ದಾರೆ. ಪ್ರಾಯಶಃ ಸೀರೆ, ಸಿರೆಹ, ಸೀರ್ಯಪದಗಳನ್ನು ಶಾಸನಗಳ ಕಾಲಾನುಕ್ರಮದಲ್ಲಿ ಗುರುತಿಸಬಹುದಾದ್ದರಿಂದ ಸೀರ್ಯದ ಸಂಸ್ಕೃತಾನುಕರಣ 'ಸಿಬಿರ' ಎಂದು ಗುರುತಿಸುವುದು ಉಚಿತವೆನಿಸುವುದು.

ಅನಂತಪುರ ಜಿಲ್ಲೆಯ ಗೆಜೆಟಿಯರ್‌ನ ಪ್ರಕಾರ "ವಿಜಯನಗರ ದೊರೆಗಳ ಕಾಲದಲ್ಲಿ ಹಿರೇ ಒಡೆಯ ಎಂಬುವನಿಂದ ಸಿರಾ ಪಾಳೆಯಗಾರರ ಮನೆತನವು ಪ್ರಾರಂಭವಾಗಿದೆ ಎಂದು ಚಿತ್ರಲಿಂಗಯ್ಯನವರು ಹೇಳಿದ್ದಾರೆ."[೮] ಸದರಿ ಹಿರೇ ಒಡೆಯನ ಮಕ್ಕಳು ರಾಯಪ್ಪರಾಜ ಮತ್ತು ವೀರರಾಯಪ್ಪರಾಜ ಇವರುಗಳು ಜಹಗೀರು ಗ್ರಾಮ ಭೂಮಿಯನ್ನು ಅನುಭವಿಸಿಕೊಂಡಿದ್ದರು.[೯] ಒಂದು ದಿನ ರಾತ್ರಿ ಅವರ ಮನೆ ದೈವವಾದ ಶ್ರೀರಂಗನಾಥನು ಸ್ವಪ್ನದಲ್ಲಿ ದರ್ಶನ ನೀಡಿ ಅಲ್ಲಿ ಒಂದು ಪಟ್ಟಣವನ್ನು ಕಟ್ಟಲು ಆಜ್ಞೆಯಾಯಿತು.[೧೦] ಈ ವೇಳೆಗೆ ರಾಯಪ್ಪರಾಜನ ಮಗ ಕರೇ ರಂಗಪ್ಪರಾಜನು ರಾಜ್ಯದ ವಿಚಾರಣೆಯ ಸಲುವಾಗಿ ಹೊರಟು ಈಗಿನ ಸಿರಾ ಪ್ರಾಂತ್ಯದಲ್ಲಿ ಬೇಟೆಯಾಡುತ್ತಿರಲು; ಒಂದು ಮೊಲವು ತನ್ನ ಬೇಟೆ ನಾಯಿಯ ಮೇಲೇರಿ ಬಂದಿತಂತೆ. ಆದ್ದರಿಂದ ಇದು ಗಂಡು ಭೂಮಿಯೆಂದು ತಿಳಿದು, ಮೊಲವು ನಾಯಿಯನ್ನು ಅಟ್ಟಿಸಿಕೊಂಡು ಹೋದಷ್ಟು ಪ್ರದೇಶವನ್ನು ಗುರುತು ಮಾಡಿ ಇಲ್ಲಿ ಪಟ್ಟಣವನ್ನು ಕಟ್ಟಿಸಬೇಕೆಂದು ರಂಗಪ್ಪರಾಜರು ಭೂ ಸಂಶೋಧನೆಯನ್ನು ಮಾಡುವಾಗ ಹೇರಳ ದ್ರವ್ಯವೂ ಸಿಕ್ಕಿತು. ಈ ವೇಳೆಯಲ್ಲಿ 'ದೇವಗ-ಶಿರಗ' ಎಂಬುವರು ಹೆಚ್ಚಿನ ಶ್ರಮ ಮತ್ತು ನಿಷ್ಠೆಯಿಂದ ಕೆಲಸ ಮಾಡಿದರು. ಇವರನ್ನು ಮೆಚ್ಚಿದ ರಂಗಪ್ಪರಾಜ ಸಿರಿಯನ ಹೆಸರಿನ ಸ್ಮಾರಕವಾಗಿ ಆ ಪಟ್ಟಣಕ್ಕೆ 'ಸಿರಿಯಾ' ಎಂದು ಹೆಸರಿಟ್ಟನು. ಶಾಲಿವಾಹನ ಶಕವರುಷ ೧೪೪೨ನೇ ವಿಕ್ರಮ ಸಂವತ್ಸರ ಮಾಘ ಮಾಸದಲ್ಲಿ (ಕ್ರಿ.ಶ.ಜನವರಿ ೧೫೨೧) ದ್ರವ್ಯ ಸಿಗಲಾಗಿ ಇವರಿಗೆ[೧೧] ವಿಜಯನಗರದ ಸದಾಶಿವರಾಯರು ಶಾಲಿವಾಹನ ಶಕವರುಷ ೧೪೬೫ನೇ ಶೋಭಕೃತು ಸಂವತ್ಸರದಲ್ಲಿ(ಕ್ರಿ.ಶ.೧೫೪೩) ಐವತ್ತು ಸಾವಿರ ರೂಪಾಯಿ ಪೇಶ್‌ಕಷ್ ನಿಗದಿ

ಮಾಡಿದರು. ರಂಗಪ್ಪರಾಜನ ಮಕ್ಕಳಾದ ಕೃಷ್ಣಪ್ಪರಾಜ, ನರಸಪ್ಪರಾಜ ಇವರ ಪೈಕಿ ಒಂದನೆಯ ಕೃಷ್ಣರಾಜನಿಗೆ ಕೃಷ್ಣಪ್ಪನಾಯಕ ಎಂತಲೂ ಕರೆಯುತ್ತಿದ್ದರು. ಅವನಿಗೆ ಚಿತ್ರದುರ್ಗದ ಕಸ್ತೂರಿ ರಂಗಪ್ಪನಾಯಕನ ಮಗಳು ಓಬವ್ವನಾಗತಿಯನ್ನು ಕೊಟ್ಟು ಮದುವೆ ಮಾಡಲಾಗಿತ್ತು ಎಂದು ಪಿ.ನಾಯಕರವರು ತಮ್ಮ 'ಚಿತ್ರದುರ್ಗದ ಗಜಕೇಸರಿ' ಕೃತಿಯಲ್ಲಿ ಹೇಳಿದ್ದಾರೆ. ವಾಸ್ತವವಾಗಿ ಸರ್ಜೆ ಕೃಷ್ಣಪ್ಪರಾಜ-> ರಂಗಪ್ಪರಾಜ -> ಸೀರೆದ ರಂಗಪ್ಪರಾಜ(ಕ್ರಿ.ಶ.೧೫೬೨)-> ಕೃಷ್ಣಪ್ಪರಾಜ-> ರಂಗಪ್ಪರಾಜ-> ಕಸ್ತೂರಿ ರಂಗಪ್ಪ ಇತ್ಯಾದಿಯಾಗಿ ಅವರ ವಂಶಾವಳಿಯೇ ಬೇರೆ ಇದೆ[೭] ಎಂದು ಎಂ.ವಿ.ಚಿತ್ರಲಿಂಗಯ್ಯನವರು 'ಹರತಿ ಪಾಳೆಯಗಾರರ ಮೂಲ ವಂಶಾವಳಿ ಒಂದು ವ್ಯಾಸಂಗ' ಎಂಬ ಲೇಖನದಲ್ಲಿ ಅಭಿಪ್ರಾಯಪಟ್ಟಿದ್ದಾರೆ.

'ಸಿರಾ' ಪಟ್ಟಣ ಸ್ಥಾಪನೆಯಾಗುವುದಕ್ಕೆ ಮೊದಲು ಆ ಸ್ಥಳ ಸಂಪೂರ್ಣ ದಟ್ಟ ಅರಣ್ಯವಾಗಿತ್ತು. ನಂತರ ಇದು ರತ್ನಗಿರಿ ಪಾಳೆಯಗಾರನಾಗಿದ್ದ ರಂಗಪ್ಪರಾಜನು ತನ್ನ ಅಧೀನಕ್ಕೆ ತೆಗೆದುಕೊಂಡು, ಬೆಳೆಯುತ್ತಿದ್ದ ಜನಸಂಖ್ಯೆಗೆ ಅನುಗುಣವಾಗಿ ವಸತಿ ಸೌಕರ್ಯ ಕಲ್ಪಿಸಲು ಅರಣ್ಯವನ್ನು ಸಮತಟ್ಟು ಮಾಡುವುದಕ್ಕೆ ಆದೇಶಿಸಿದನು. ಈ ಸಮಯದಲ್ಲಿ ಗೌಳಿಗ ಜನಾಂಗಕ್ಕೆ ಸೇರಿದ 'ದೇವಣ' ಮತ್ತು 'ಸಿರಿಯಪ್ಪ' ಎಂಬ ಸಹೋದರರು ತಮ್ಮ ಆಕಳುಗಳ ಸಮೇತ ಈ ಪ್ರದೇಶಕ್ಕೆ ಬಂದರು. ಇಲ್ಲಿ ತಮಗೆ ಸಾಕಷ್ಟು ಅನುಕೂಲವಿದ್ದುದರಿಂದ ಈಗಿನ ತೋಟವಿರುವ ಎತ್ತರವಾದ ಪ್ರದೇಶವೆನಿಸಿದ 'ಬೂದಿ ದಿಬ್ಬ' ಎಂದು ಕರೆಯುವ ಸ್ಥಳದಲ್ಲಿ ಕೊಪ್ಪವನ್ನು ಹಾಕಿಕೊಂಡು ನೆಲೆನಿಂತರು. ಕ್ರಮೇಣ ರತ್ನಗಿರಿ ಪಾಳೆಯಗಾರನ ಅಪ್ಪಣೆಯನ್ನು ಪಡೆದುಕೊಂಡು 'ದೇವಣಾ ಸಿರಾ' ಎಂಬ ಗ್ರಾಮವನ್ನು ಸ್ಥಾಪಿಸಿದರು. ಒಂದು ದಿನ ರತ್ನಗಿರಿ ಪಾಳೆಯಗಾರ ರಂಗಪ್ಪನಾಯಕನು ತನಗೆ ಸೇರಿದ್ದ ಅರಣ್ಯ ಪ್ರದೇಶಕ್ಕೆ ಬೇಟೆಯಾಡಲು ಬಂದು 'ದೇವಣಾ ಸಿರಾ'ದಲ್ಲಿ ದಣಿವಾರಿಸಿಕೊಂಡನು. ಅಲ್ಲಿನ ಪ್ರಕೃತಿ ಸೌಂದರ್ಯದಿಂದ ಸಂತೋಷಗೊಂಡು ಅದೇ ಸಮಯಕ್ಕೆ ರಕ್ಷಣೆಯ ದೃಷ್ಟಿಯಿಂದ ಆ ಸ್ಥಳದಲ್ಲಿ ಕೋಟೆ ಕಟ್ಟುವ ಯೋಚನೆ ಮಾಡಿದನು[೮] ಎಂದು ಡಿ.ಎನ್ .ಯೋಗೀಶ್ವಪ್ಪನವರು ತಮ್ಮ 'ಸಿರಾದ ನವಾಬರು' ಎಂಬ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.

## ೨.೨. ಸಿರಾದ ಐತಿಹಾಸಿಕ ಹಿನ್ನೆಲೆ

'ಸಿರಾವು' ಐತಿಹಾಸಿಕ ಮಹತ್ವವನ್ನು ಹೊಂದಿರುವುದೆಂದು ಹಲವಾರು ಶಾಸನಗಳಿಂದ ತಿಳಿದು ಬರುತ್ತದೆ. ಕ್ರಿ.ಶ.೮೭೮ರ ಪಲ್ಲವಾಧಿರಾಜನ ಮಗ ಶ್ರೀ ಮಹೇಂದ್ರಾದಿ ರಾಜನ ಕಾಲದ ಸಿರಾ ಶಾಸನವು ಸೀರೆನಾಡು ನಾನ್ನೂರನ್ನು ಉಲ್ಲೇಖಿಸುತ್ತದೆ.[೯]

೫ನೇ ವಿಕ್ರಮಾದಿತ್ಯನ ನಂತರ ಬಂದ ಜಯಸಿಂಹನು ಜಗದೇಕಮಲ್ಲನೆಂಬ ಬಿರುದನ್ನು ಪಡೆದು ಚೋಳರನ್ನು ಹಿಮ್ಮೆಟ್ಟಿ ರಾಜ್ಯವನ್ನು ವಿಸ್ತರಿಸಿದ್ದನು. ಚಳ್ಳಕೆರೆ ತಾಲ್ಲೂಕಿನಲ್ಲಿ ದೊರಕುವ ಎರಡು ಶಾಸನಗಳಿಂದಲೂ ಮತ್ತು ಇತರ ದಾಖಲೆಗಳಿಂದಲೂ ಇವನು ರೊಡ್ಡಾಸಿರಾ, ನೊಳಂಬವಾಡಿ ಮುಂತಾದ ಪ್ರಾಂತ್ಯಗಳನ್ನು ಆಳುತ್ತಿದ್ದನು ಎಂದು ತಿಳಿದುಬರುತ್ತದೆ.[೧೦]

ಕ್ರಿ.ಶ.೧೧೨೭ನೇ ಸಿರಾ ಶಾಸನ ಹೇಳುವಂತೆ ಮುಮ್ಮಡಿ ಸೋಮೇಶ್ವರನು ಕಣೆಯಕಲ್ಲು ಮುನ್ನೂರು, ರೊದ್ದ ಮುನ್ನೂರು, ಸಿರಾ ಮುನ್ನೂರು, ಹರವೆ ಮುನ್ನೂರು, ಸಿಂದವಾಡಿ ಸಾಸಿರಗಳ ಅಧಿಪತಿಯಾಗಿದ್ದನು.[೧೧] ಮಲ್ಲಿದೇವನ ಶಾಸನಗಳ ಪ್ರಕಾರ ಈತನು 'ತ್ರಿಭುವನ ಮಲ್ಲಿದೇವ' ಎಂಬ ಬಿರುದು ಪಡೆದಿದ್ದು, ರೊದ್ದನಾಡು, ಕಣೆಯಕಲ್ಲುನಾಡು, ಸೀರೆನಾಡು, ಹರುವೆನಾಡುಗಳನ್ನೊಳಗೊಂಡ ಹೆಂಜೇರು ಈತನ ರಾಜಧಾನಿಯಾಗಿದ್ದಿತು[೧೨] ಎಂದು ಉಲ್ಲೇಖಿಸಲಾಗಿದೆ.

ಇಮ್ಮಡಿ ಬಮ್ಮದೇವನು (ಕ್ರಿ.ಶ.೧೨೧೯-೧೨೩೨) ರೊದ್ದ, ಕಣೆಯಕಲ್ಲು, ಸೀರೆನಾಡು, ಮಧ್ಯೆಮ್ಮನಾಡು ಮುಂತಾದ ಪ್ರದೇಶಗಳನ್ನು ಆಳಿದನು ಎಂದು ರೊಪ್ಪದ ಶಾಸನದಿಂದ ತಿಳಿಯುತ್ತದೆ.[೧೩] ಅಮರಾಪುರದ ಶಾಸನ ಇರುಂಗೋಳ ಚೋಳ ಮಹಾರಾಜನ ಮಗನಾದ ತ್ರಿಪುರಾಂತಕ ದೇವನು ಹನಿಯ ದುರ್ಗದಲ್ಲಿ ಆಳುತ್ತಿದ್ದನು. ಈತನು ಕ್ರಿ.ಶ.೧೨೬೨ರಲ್ಲಿ ಸೀರೆನಾಡಿನ ತೈಲಗೆರೆಯ ಶಿವದೇವಾಲಯಗಳಿಗೆ ದಾನ ನೀಡಿದ ಬಗ್ಗೆ ತಿಳಿಸುತ್ತದೆ. ಹೀಗೆ ಬಂಗಿಜೇರು ಮೂವತ್ತು, ಸೀರೆನಾಡು ಮುನ್ನೂರಿಗೆ; ಹೇಮಾವತಿ ಸಿಂದವಾಡಿ ಒಂದು ಸಾವಿರಕ್ಕೆ; ತಂಬಲಗಿ ಹರುವೆ ಮುನ್ನೂರಿಗೆ ಪರಗಿ ಕೇಂದ್ರಪ್ರದೇಶಗಳಾಗಿದ್ದವು[೧೪] ಎಂದು ಉಲ್ಲೇಖಿಸಿದೆ.

ಹೀಗೆ ಸಿರಾವು ಸುಮಾರು ೮ನೇ ಶತಮಾನದಿಂದಲೂ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿದ್ದು, ತನ್ನದೇ ಆದ ಐತಿಹಾಸಿಕ ಮಹತ್ವವನ್ನು ಹೊಂದಿದೆ. ಕ್ರಿ.ಶ.೮ ರಿಂದ ೧೨ನೇಯ ಶತಮಾನದವರೆಗಿನ ಕಾಲಾವಧಿಯಲ್ಲಿ ಚೋಳರು ಹೇಮಾವತಿ ಮತ್ತು ನಿಡಗಲ್ಲಿನ ನಡುವಣ ಪ್ರದೇಶಕ್ಕೆ ಒಡೆಯರಾಗಿದ್ದರು. ಸೀರ್ಯ ತಾಲ್ಲೂಕಿನ ಬಡಗಣ ಗಡಿಯಲ್ಲಿರುವ ಹೇಮಾವತಿ ಎಂದು ಈಗ ಹೆಸರಾಗಿರುವ 'ಪಂಜೇರು' ಅಥವಾ 'ಹೆಂಜೇರು' ಅವರ ರಾಜಧಾನಿಯಾಗಿತ್ತು.[೧೫]

ಕರ್ನಾಟಕದಲ್ಲಿ ಸುಮಾರು ೧೨ನೆಯ ಶತಮಾನದಿಂದಲೂ ನಾಯಕ ವಂಶದವರು ಆಡಳಿತ ನಡೆಸುತ್ತಿದ್ದಾರೆಂಬುದು ಕೆಲವು ಶಾಸನಗಳಿಂದ ತಿಳಿದುಬರುತ್ತದೆ. ಅವರಲ್ಲಿ ಆನೆಗೊಂದಿಯಿಂದ ಬಂದು ಈಗಿನ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಹರ್ತಿಕೋಟೆಯ ಬಳಿ ನಾಯಕ ವಂಶಕ್ಕೆ ಸೇರಿದ ಇರಸಪ್ಪರಾಜನೆಂಬುವನು ರಾಜ್ಯಭಾರ ಮಾಡುತ್ತಿದ್ದನು. ಈತನು ತಮ್ಮ ವಂಶದವರಾದ ಚಂದನಾವತಿ ಎಂಬ ಆನೆಗೊಂದಿಯ ನರಪತಿ ದೊರೆಗಳ ಅನುಗ್ರಹ ಪಡೆದನು. ಇವರ ವಂಶಜರಾದ ಹಿರೇ ಒಡೆಯರು ಸಕಲ ಬಿರುದು ಬಹುಮಾನಗಳನ್ನು ಹೊಂದಿ, ನಂತರ ಇವರ ಮಕ್ಕಳು ಲಕ್ಷ್ಮಣರಾಜು ಎಂಬುವರು ಶಾಲಿವಾಹನ ಶಕ ೧೩೪೦ನೆಯ ಹೇವಿಳಂಬಿನಾಮ ಸಂವತ್ಸರದವರೆಗೂ ಆಡಳಿತ ನಡೆಸಿದರು.

ಕಾಲ ಕ್ರಮೇಣ ರಂಗಪ್ಪರಾಜ ಗಂಡು ಮೆಟ್ಟಿನ ನಾಡಾದ ಸೀರ್ಯವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಶಾಲಿವಾಹನ ಶಕ ೧೪೪೨ ರಿಂದ ೧೪೬೪(ಕ್ರಿ.ಶ.೧೫೨೦-೧೫೪೨)ರವರೆಗೆ ಆಡಳಿತ

ನಡೆಸಿದನು. ಇವನ ಮಗ ಕಸ್ತೂರಿ ರಂಗಪ್ಪನಾಯಕನು ಆಡಳಿತ ನಡೆಸುತ್ತಿರಲು, ಆನೆಗೊಂದಿ ರಾಜ ವಂಶೀಯರಾದ ಶ್ರೀರಂಗರಾಯರು 'ಸೀರ್ಯ' ಪ್ರಾಂತ್ಯಕ್ಕೆ ಬಂದರು. ಅವರನ್ನು ಸಕಲ ಬಿರುದು ಬಹುಮಾನಗಳಿಂದ ನಗರ ಪ್ರವೇಶ ಮಾಡಿಸಿದರು. ಇದರಿಂದ ಸಂತುಷ್ಟರಾದ ಶ್ರೀರಂಗರಾಯರು 'ಕುಮಾರ ಮಂಡಲಿ ಪ್ರವಿಷ್ಟ'ನೆಂಬ ಬಿರುದು ಕೊಟ್ಟು, ಸಹಾಯಕ್ಕೆ ಒಂದು ಸಾವಿರ ಸೈನಿಕದಳವನ್ನು ನೀಡಿ ಹೊರಟು ಹೋದರು. ನಂತರ ಕಸ್ತೂರಿ ರಂಗಪ್ಪನಾಯಕರೆಂಬುವರು ವಿಜಯನಗರ ಸಾಮ್ರಾಜ್ಯ ದೊಂದಿಗೆ ಉತ್ತಮ ಬಾಂಧವ್ಯವನ್ನು ಹೊಂದಿದ್ದರು.[೧೬] ನಂತರ ಹರ್ತಿಕೋಟೆಯನ್ನು ತಮ್ಮ ರಾಜಧಾನಿ ಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಹರತಿ ಪಾಳೆಯಗಾರರಲ್ಲೊಬ್ಬನಾದ ತಿಪ್ಪಳನಾಯಕನು ಕೃಷ್ಣದೇವರಾಯನ ವಿಶ್ವಾಸಕ್ಕೆ ಪಾತ್ರನಾಗಿದ್ದನು. ಇವನು ತನ್ನ ಪ್ರಾಂತ್ಯವನ್ನು ಚಿತ್ರದುರ್ಗದಿಂದ ಪಾವಗಡದವರೆಗೂ, ಮೊಳಕಾಲ್ಮೂರಿನಿಂದ ಸಿರಾದವರೆಗೂ ವಿಸ್ತರಿಸಿ ತನ್ನ ಏಳು ಜನ ಮಕ್ಕಳಿಗೆ ಹಂಚಿಕೊಟ್ಟನು.[೧೭]

ರತ್ನಗಿರಿ ಪಾಳೆಯಗಾರರ ಶಾಸನಗಳಲ್ಲಿ ಮತ್ತು ದಾನಪತ್ರಗಳಲ್ಲಿ 'ಹರತಿ ಸಂಮೇಟ' ಎಂಬ ವಿಶಿಷ್ಟ ಪದದ ಪ್ರಯೋಗವು ಗಮನ ಸೆಳೆಯುತ್ತದೆ. ಚಿಕ್ಕತಿಪ್ಪರಾಜನ 'ಸಂಮೇಟಿ' ಮತ್ತು 'ಸಂಮೇಟ' ಎಂಬ ಈ ಎರಡೂ ಪದಗಳು ಒಂದೇ ಎಂದು ಕಂಡರೂ ಇದರ ಮೂಲ ಅರ್ಥ ತಿಳಿಯದಾಗಿದೆ. ಈ ಒಂದು ಪದದ ಆಧಾರದ ಮೇಲೆ ನಿಡಗಲ್ಲಿನ ದುರ್ಗಾಧಿಪತ್ಯವನ್ನು ಕಳೆದುಕೊಂಡ ಚಿಕ್ಕತಿಪ್ಪರಾಜನು ಸೀರ್ಯದ ಪಾಳೆಯಪಟ್ಟನ್ನು ಸ್ಥಾಪಿಸಿ, ತದನಂತರ ಕ್ರಿ.ಶ.೧೬೩೦ರ ಸುಮಾರಿಗೆ ರತ್ನಗಿರಿ, ಮಿಡಿಗೇಶಿಗಳಲ್ಲಿ ನೆಲೆಸಿದರೆಂದು ಶಾಸನಗಳ ಆಧಾರದಿಂದ ನಿರ್ಣಯಿಸಬಹುದು. ಆದರೂ ಸರಿಯಾದ ಖಚಿತತೆ ಕಂಡು ಬರುವುದಿಲ್ಲವೆಂದು ಚಿತ್ರಲಿಂಗಯ್ಯನವರು ಅಭಿಪ್ರಾಯಪಟ್ಟಿದ್ದಾರೆ.[೧೮]

ಇವರ ನಂತರ ರಂಗಪ್ಪನಾಯಕನೆಂಬುವನು ಅಧಿಕಾರಕ್ಕೆ ಬಂದು ನಗರದಲ್ಲಿ ಭವ್ಯಕೋಟೆಯೊಂದನ್ನು ನಿರ್ಮಾಣ ಮಾಡಲು ಕ್ರಮ ಕೈಗೊಂಡನು. ಇಂಥ ಸಂದರ್ಭದಲ್ಲಿ ಕೋಟೆಯ ಅವಶ್ಯಕತೆ ಇದ್ದಿತು. ಏಕೆಂದರೆ ಈ ವೇಳೆಗಾಗಲೇ ಮುಸ್ಲಿಮ್ ದಾಳಿಯು ದಕ್ಷಿಣದಲ್ಲಿ ಕಾಲಿಟ್ಟು ಷಾಹಿ ರಾಜ ಮನೆತನಗಳು ಅಸ್ತಿತ್ವಕ್ಕೆ ಬಂದಿದ್ದವು.[೧೯]

ಒಂದು ದಿನ ಸಿರಾ ಪಟ್ಟಣದ ನಾಯಕನಾದ ರಂಗಪ್ಪರಾಜ ತನ್ನ ಪತ್ನಿ ಹೇಮಾಂಬಿಕೆಯೊಡನೆ ಮಾತನಾಡುತ್ತಿದ್ದಾಗ, ಹೇಮಾಂಬಿಕೆಯು ಪತಿಯ ಮುಖ ನೋಡಿ ಬೆಚ್ಚಿದಳು. ಆಗ ರಂಗಪ್ಪರಾಜ 'ಏಕೆ ಬೆಚ್ಚಿ ಬಿದ್ದೆ' ಎಂದು ಕೇಳಿದಾಗ ಹೇಮಾಂಬಿಕೆಯು 'ನಿಮ್ಮ ಹಣೆಯಲ್ಲಿ ಕಾಣುತ್ತಿದ್ದ ತಿರುನಾಮ ಕಾಣಿಸಲಿಲ್ಲ, ಇದರಿಂದ ಗಾಬರಿಯಾಗಿ ಏನೋ ನೆನಪಿಗೆ ಬಂದು ಬೆಚ್ಚಿಬಿದ್ದೆ' ಎಂದಳು. ಅಲ್ಲದೆ "ನನ್ನ ಸ್ವಪ್ನದಲ್ಲಿ ನೀವು ಎಂದಿನಂತೆ ತಿರುನಾಮವನ್ನು ಇಟ್ಟುಕೊಳ್ಳಲು ಕನ್ನಡಿಯನ್ನು ನೋಡಿದಿರಿ, ಅದರಲ್ಲಿ ನಿಮ್ಮ ತಲೆಯೇ ಕಾಣಿಸಲಿಲ್ಲ. ಇದು ಮುಂದೆ ಬರಲಿರುವ ಯಾವುದೋ ವಿಪತ್ತಿನ ಸಂಕೇತವೆಂದೂ

ಹೆದರಿದೆ. ಅಷ್ಟರಲ್ಲಿ ಬೆಳಗಾಯಿತು. ಆಗ ನಿಮ್ಮ ಹಣೆಯಲ್ಲಿ ನಾಮವಿರಲಿಲ್ಲ. ತಟಕ್ಕನೆ ನನಗೆ ರಾತ್ರಿಯ ದುಃಸ್ವಪ್ನ ನೆನಪಿಗೆ ಬಂದಿತು" ಎಂದಳು. ಆಗ ರಂಗಪ್ಪರಾಜ "ಕನಸುಗಳನ್ನು ಕಂಡು ಇಷ್ಟು ಹೆದರುವುದೆ. ಕೆಲವು ಬಾರಿ ಅಜೀರ್ಣ ಮತ್ತು ಯಾವುದೋ ಅತೃಪ್ತ ಬಯಕೆ ಕನಸಾಗಿ ಪ್ರಕಟವಾಗುವುದು ಉಂಟು" ಎಂದನು. ಮತ್ತೆ ಗಾಬರಿಯಾದ ಹೇಮಾಂಬಿಕೆಯು "ನೀವು ಇಂದು ಎಲ್ಲೂ ಹೋಗಬೇಡಿ ಯಾವ ಸಾಹಸ ಕಾರ್ಯಕ್ಕೂ ತೊಡಗಬೇಡಿ" ಎಂದಳು. ರಂಗಪ್ಪರಾಜ ಯೋಚಿಸಿ "ಹೆದರಬೇಡ ದೇವಿ ನರಸಿಂಹಸ್ವಾಮಿಯ ಕೃಪೆ ಇರುವವರೆಗೂ ನಾವು ಯಾವುದಕ್ಕೂ ಹೆದರಬೇಕಿಲ್ಲ. ಆದರೂ ನಿನ್ನ ಸಮಾಧಾನಕ್ಕೆ ಜೋಯಿಸರನ್ನು ಕರೆಸಿ ಶಾಂತಿಯನ್ನು ಮಾಡಿಸೋಣ" ಎಂದು ಪತ್ನಿಯನ್ನು ಸಮಾಧಾನ ಪಡಿಸಿದನು. ಆದರೂ ಪತ್ನಿಯ ಕನಸಿನ ವಿಚಾರದ ಬಗ್ಗೆ ನಾಯಕನಲ್ಲಿ ಕಳವಳ ಇದ್ದೇ ಇತ್ತು.

ಈ ಕಳವಳವನ್ನು ಹೊತ್ತು ಕೋಟೆಯ ಬತೇರಿಯ ಮೇಲೆ ಎಂದಿನಂತೆ ಸಂಚರಿಸುತ್ತಿದ್ದಾಗ ದೂರದಲ್ಲಿ ಧೂಳೆದ್ದಿರುವುದನ್ನು ನೋಡಿದನು. ತಕ್ಷಣ ಆಪ್ತಮಂತ್ರಿ ನರಸಯ್ಯನನ್ನು ಕರೆಸಿಕೊಂಡು ಬಿಜಾಪುರದ ರಣದುಲ್ಲಾಖಾನನು ಮೈಸೂರಿನ ಮೇಲೇರಿ ಹೋಗುತ್ತಾನೆಂಬ ಸುದ್ದಿ ಇದೆ. ಆದರೆ ಆ ಸೈನ್ಯವೇನಾದರೂ ಇತ್ತಲೇ ಬರುತ್ತಾ ಇದೆಯೆ ಎಂಬುದನ್ನು ವಿಚಾರಿಸಿ ಎಂದನು.[೨೦] ಇಂಥ ಸನ್ನಿವೇಶದಿಂದ ಎಚ್ಚೆತ್ತುಕೊಂಡ ರಂಗಪ್ಪರಾಜನು ಸ್ವಸಂರಕ್ಷಣೆಯ ಸಲುವಾಗಿಯೂ, ರಾಜ್ಯಾಡಳಿತ ರಕ್ಷಣೆಯ ದೃಷ್ಟಿಯಿಂದಲೂ ಒಂದು ಕೋಟೆಯನ್ನು ಕಟ್ಟಿಸುವುದು ಅನಿವಾರ್ಯವೆನಿಸಿ ಕೋಟೆ ನಿರ್ಮಾಣ ಕಾರ್ಯಕೈಗೊಂಡನು. ಈ ಕೋಟೆಯ ನಿರ್ಮಾಣದ ಮಹತ್ವವನ್ನು ಜಾನಪದ ಗೀತೆಯಲ್ಲಿ ವ್ಯಕ್ತವಾಗಿರುವುದನ್ನು ಈ ರೀತಿ ಕಾಣಬಹುದು.

ಗೂಡುಗಲ್ಲಿನ ಮೇಲೆ | ಮೂಡ್ಯಾತು ಸೀರ್ರೇವು |
ಸುತ್ತ ಕಾಡೆಲ್ಲಾ | ಕಡಿಸಾನೆ |
ಸುತ್ತ ಕಾಡೆಲ್ಲಾ | ಕಡಿಸಾನೆ | ರಂಗಣ್ಣ | ಕಟ್ಟೀದ ಕೋಟೆಯಾ ಮುಗಿಲುದ್ದ||

ಹತ್ತಿ ಕಟ್ಟಿದ ಕೋಟೆ | ಚಕ್ರಬಿಂಬದ ಕೋಟೆ |
ಹತ್ತೀತು ಕೋಟೆ ಮುಗಿಲುದ್ದ |
ಹತ್ತೀತು ಕೋಟೆ ಮುಗಿಲುದ್ದ | ರಂಗಣ್ಣನ | ಮುದ್ದಾದ ಮಗನ | ಬಸರೀಲಿ||

ಏರಿತೇರಿತು | ಕೋಟೆ | ಬಾನಕೇರಿತು | ಕೋಟೆ |
ಏರೀತು ಕೋಟೆ | ಮುಗಿಲುದ್ದ |
ಏರೀತು | ಕೋಟೆ | ಮುಗಿಲುದ್ದ | ರಂಗಣ್ಣನ |
ಮುದ್ದಾದ ಮಗನ ಬಸರೀಲಿ||[೨೧]

ಹೀಗೆ ಕೋಟೆಯ ಮಹತ್ವವನ್ನು ವಿವರಿಸಲಾಗಿದೆ.

ಇಂಥ ಕೋಟೆಯ ಮೇಲೆ ಬಿಜಾಪುರ ಸೈನ್ಯವು ಸ್ನೇಹದಿಂದ ಇದ್ದು ಅಕ್ಷಮ್ಯ ಕಾರಣಗಳಿಂದ ಶತ್ರುಗಳಾಗಿ ಮಾರ್ಪಟ್ಟು ತರೀಕೆರೆಯ ಪಾಳೆಯಗಾರರ ಜೊತೆಗೂಡಿ ಯುದ್ಧ ಸಾರಿದರು. ಕ್ರಿ.ಶ.೧೬೭೨ರ

ತಾಮ್ರ-ಶಾಸನದಲ್ಲಿ ಕಸ್ತೂರಿ ರಂಗಪ್ಪರಾಜುವಿನ ಸಹೋದರ ರಂಗಪ್ಪರಾಜ ಹಿರಿಯೂರು ಮುತ್ತಿಗೆಯಲ್ಲಿ ಮರಣ ಹೊಂದಿದನೆಂದೂ, ಕಸ್ತೂರಿ ರಂಗಪ್ಪನಾಯಕನ ಮಗ ರಂಗಪ್ಪನಾಯಕನು 'ಗುಮ್ಮಳ್ಳಿ ಕದನ'ದಲ್ಲಿ ಮಡಿದನೆಂದು[೨೧] ಉಲ್ಲೇಖಿಸಿದೆ.

## ೨.೩. ಸಿರಾದ ನವಾಬರ ಹಿನ್ನೆಲೆ

ಕ್ರಿ.ಶ.೧೭ ಮತ್ತು ೧೮ನೆಯ ಶತಮಾನಗಳಲ್ಲಿ ಸಿರಾ ಪ್ರಾಂತ್ಯವನ್ನಾಳಿದವರಲ್ಲಿ ಸಿರಾದ ನವಾಬರು ಪ್ರಮುಖರು. ಭೌಗೋಳಿಕವಾಗಿ ಗೋಲ್ಕಂಡ, ಕರ್ನಾಟಕ ಮತ್ತು ಬಿಜಾಪುರ ಕರ್ನಾಟಕವನ್ನು ಮೇಲ್ಮಟ್ಟದ ಪ್ರದೇಶಗಳು ಮತ್ತು ಸಮತಟ್ಟಾದ ಪ್ರದೇಶಗಳೆಂದು ವರ್ಗೀಕರಣ ಮಾಡಿದ್ದಾರೆ. ಗೋಲ್ಕಂಡ ಕರ್ನಾಟಕವು ನಂದ್ಯಾಲದ ದಕ್ಷಿಣದಿಂದ ಪ್ರಾರಂಭವಾಗಿ ಸಿದ್ದೋಟ್ ಗಂಡಿಕೋಟ, ಗುತ್ತಿ, ಗುರಂಕೊಂಡ ಮತ್ತು ಕಡಪಾ ಪ್ರದೇಶಗಳನ್ನೊಳಗೊಂಡಿದೆ. ಈಗ ಇವೆಲ್ಲವೂ ಆಂಧ್ರಪ್ರದೇಶದಲ್ಲಿವೆ.

ಬಿಜಾಪುರ-ಬಾಲ್ಘಾಟ್-ಗೋಲ್ಕಂಡವು ಕರ್ನಾಟಕದ ಪಶ್ಚಿಮದಲ್ಲಿದೆ. ಈ ಪ್ರದೇಶಕ್ಕೆ ಸಿರಾ ಮತ್ತು ಬೆಂಗಳೂರು ಜಿಲ್ಲೆಗಳು ಸೇರಿವೆ.[೨೨] ವಿಜಯನಗರದ ಪತನಾನಂತರ ಕರ್ನಾಟಕ ಪ್ರದೇಶದಲ್ಲಿ ರಾಜಕೀಯ ಸಂದಿಗ್ಧತೆಯನ್ನು ಕಾಣಬಹುದು. ೧೬ನೆಯ ಶತಮಾನದ ದ್ವಿತೀಯಾರ್ಧದಲ್ಲಿ ಮೊಗಲರು ಉತ್ತರ ಭಾರತದಲ್ಲಿ ಉತ್ಕರ್ಷಕ್ಕೆ ಬರುತ್ತಿದ್ದರು. ಒಂದು ಕಡೆ ಬಿಜಾಪುರ ಗೋಲ್ಕಂಡಗಳೆಲ್ಲಾ ಮೊಗಲರ ಆಳ್ವಿಕೆಗೆ ಒಳಪಟ್ಟಿದ್ದವು. ಮತ್ತೊಂದು ಕಡೆ ದಖನ್ನಿನ ಉತ್ತರದಲ್ಲಿ ಆರಂಭವಾದ ಮರಾಠ ಶಕ್ತಿ ಇದ್ದಿತು. ಇವೆರಡೂ ಆಗಿಂದಾಗ್ಗೆ ಕರ್ನಾಟಕದ ರಾಜಕೀಯವನ್ನು ಚದುರಿಸಿ ಹೋಗುತ್ತಿದ್ದವು.

ವಿಜಯನಗರ ಸಾಮ್ರಾಜ್ಯ ಅವನತಿ ಹೊಂದಿದ ನಂತರ ಬಿಜಾಪುರದ ಆದಿಲ್‌ಷಾಹಿಗಳು ಒಂದು ಪ್ರಬಲ ರಾಜಕೀಯ ಶಕ್ತಿಯಾಗಿ ಬೆಳೆದಿದ್ದರು. ಕ್ರಿ.ಶ.೧೬೨೬-೫೬ರ ಅವಧಿಯಲ್ಲಿ ಮಹಮದ್ ಆದಿಲ್ ಷಾ ಅತ್ಯಂತ ಬಲಿಷ್ಠ ಹಾಗೂ ದಕ್ಷ ಷಾಹಿ ಸುಲ್ತಾನರುಗಳಲ್ಲೇ ಒಬ್ಬನಾಗಿದ್ದನು. ಈತನು ಮೊಗಲ್ ಷಾಹಿಯ ವಿಸ್ತರಣೆಯನ್ನು ಕ್ರಿ.ಶ.೧೬೩೬ರವರೆಗೆ ಯಶಸ್ವಿಯಾಗಿ ತಡೆದನು. ಆದರೂ ಮೊಗಲರೊಂದಿಗೆ ಅಧೀನತ್ವದ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಇದರಿಂದ ಉತ್ತರದಲ್ಲಿ ತನಗಾದ ನಷ್ಟವನ್ನು ಭರಿಸಲು ದಕ್ಷಿಣದ ಕಡೆ ತಿರುಗಿ ಕರ್ನಾಟಕದ ಬಹುಭಾಗದ ಮೇಲೆ ತನ್ನ ಪ್ರಭುತ್ವ ಸ್ಥಾಪಿಸಲು ಹೊರಟನು.[೨೩]

## ೨.೪. ಪ್ರಾರಂಭಿಕ ಆಕ್ರಮಣಗಳು

ವಿಜಯನಗರ ಸಾಮ್ರಾಜ್ಯದ ಪತನಾನಂತರ ದಕ್ಷಿಣದ ಪಾಳೆಯಗಾರರು ತಮ್ಮ ತಮ್ಮಲ್ಲೇ ಕಚ್ಚಾಡುತ್ತಿದ್ದರು. ಅಲ್ಲದೇ ಆದಿಲ್‌ಷಾಹಿ ಮತ್ತು ಗೋಲ್ಕಂಡದ ಸುಲ್ತಾನರೊಂದಿಗೆ ವಿರೋಧವನ್ನು ತೋರುತ್ತಿದ್ದರು. ಕ್ರಿ.ಶ.೧೬೩೬ರ ಮೊಗಲರೊಂದಿಗಿನ ಒಪ್ಪಂದದಿಂದ ಉಭಯ ಸುಲ್ತಾನರಿಗೂ

ದಕ್ಷಿಣದಲ್ಲಿ ರಾಜ್ಯ ವಿಸ್ತರಣೆ ನಿರಾತಂಕವಾಯಿತು.[೨೪] ಕ್ರಿ.ಶ.೧೪೮೯ರಲ್ಲಿ ಸ್ಥಾಪಿತವಾದ ಬಿಜಾಪುರ ಆದಿಲ್‌ಷಾಹಿ ಮನೆತನವು ಕರ್ನಾಟಕ ಇತಿಹಾಸದಲ್ಲಿ ವಿಶೇಷ ಪಾತ್ರವಹಿಸಿದೆ. ಈ ಹಂತದಲ್ಲಿ ಷಾಹಿ ದೊರೆಗಳು ವಿಜಯನಗರದ ಅಧೀನಕ್ಕೆ ಒಳಪಟ್ಟ ಪ್ರದೇಶಗಳ ಮೇಲೆ ಹಿಡಿತ ಸಾಧಿಸುವ ಪ್ರಯತ್ನವನ್ನೇನೋ ಮಾಡಿದರು. ಆದರೆ ವಿಜಯನಗರದ ಆಡಳಿತ ವ್ಯವಸ್ಥೆಯಲ್ಲಿ ಬಹುಮುಖ್ಯ ಪಾತ್ರವಹಿಸಿದ ನಾಯಕರು, ಅಮರನಾಯಕರು, ನಾಡಗೌಡರು, ನಾಡಪ್ರಭುಗಳು ಆಡುಭಾಷೆಯಲ್ಲಿ ಪಾಳೆಯಗಾರರೆನಿಸಿಕೊಂಡಿದ್ದವರೆಲ್ಲಾ ಸ್ವತಂತ್ರರಾಗಲು ಬಯಸಿದರು. ಹೀಗೆ ಹುಟ್ಟಿಕೊಂಡ ಸಂಸ್ಥಾನಗಳಲ್ಲಿ ಮೈಸೂರು, ಚಿತ್ರದುರ್ಗ, ಕೆಳದಿ, ಯಲಹಂಕ ಮುಂತಾದವು ಪ್ರಮುಖವಾಗಿವೆ.[೨೫]

ಕ್ರಿ.ಶ.೧೫೮೮ ರಿಂದ ೧೫೯೭ರ ಅವಧಿಯಲ್ಲಿ ಇಬ್ರಾಹಿಂ ಆದಿಲ್‌ಷಾಹನು ತನ್ನ ಶಕ್ತಿಯನ್ನು ಅವಲಂಬಿಸಿ ರಾಜ್ಯವನ್ನು ಆಳುತ್ತಿದ್ದನು. ಈ ಅವಧಿಯಲ್ಲಿ ಕರ್ನಾಟಕ ಭಾಗದಲ್ಲಿಯ ಪಾಳೆಯಗಾರರು ಬಿಜಾಪುರಕ್ಕೆ ಕಪ್ಪಕಾಣಿಕೆ ಕೊಡುವುದನ್ನು ನಿಲ್ಲಿಸಿದರು. ಆದಿಲ್‌ಷಾಹಿ ದಂಡನಾಯಕ ಮಜುಂಖಾನನು ಬಂಕಾಪುರದಲ್ಲಿ ಕುಳಿತು ಎಲ್ಲ ನಾಯಕ, ಪಾಳೆಯಗಾರರಿಗೆ ಫರ್ಮಾನುಗಳನ್ನು ಕಳುಹಿಸಿದನು. ಅದೇನೆಂದರೆ "ಬಿಜಾಪುರದ ಬಾದಷಹನನ್ನು ಒಪ್ಪಿ ವರ್ಷಂಪ್ರತಿ ಕೊಡುವ ಕಪ್ಪಕಾಣಿಕೆಗಳನ್ನು ಕೊಟ್ಟವರಿಗೆ ಅವರ ಜಹಗೀರುಗಳನ್ನು ಮುಂದುವರಿಸಲಾಗುವುದು. ಇಲ್ಲವಾದಲ್ಲಿ ಯುದ್ಧಕ್ಕೆ ಸಿದ್ಧರಾಗ ಬೇಕೆಂದು" ಸಂದೇಶ ಕಳುಹಿಸಿದನು. ಇದರಿಂದ ಸಿರಾದ ಅರಸಪ್ಪನಾಯಕನು ವಿರೋಧ ವ್ಯಕ್ತಪಡಿಸಿದ ನಾದರೂ ಅನಂತರ ಬಿಜಾಪುರ ಸೈನ್ಯವನ್ನು ಎದುರಿಸದೆ ಶರಣಾಗತನಾಗಿ ಕಪ್ಪ-ಕಾಣಿಕೆಯನ್ನು ಕೊಡಲು ಒಪ್ಪಿದನು.[೨೬]

### ೨.೪.೧. ಕೆಳದಿಯ ಮೇಲೆ ಆಕ್ರಮಣ

ಬಿಜಾಪುರದ ನವಾಬರು ವಿಜಯನಗರದ ವೈರಿಗಳಿಗೆ ಸದಾ ಒತ್ತಾಸೆ ನೀಡುತ್ತಿದ್ದರು. ಕೆಳದಿಯ ಚಿಕ್ಕ ಸಂಕಣ್ಣನು ಪಟ್ಟಾರೂಢನಾದ ಅನತಿ ಕಾಲದಲ್ಲೆ ಗೇರು ಸೊಪ್ಪೆಯ ಭೈರಾರಾಣಿ ಮತ್ತು ಬಿಜಾಪುರದ ಮಜುಂಖಾನನೂ ಕೆಳದಿಯನ್ನು ಕಬಳಿಸಲು ಹವಣಿಸಿ ವಿಫಲರಾದರು.[೨೭] ಈ ವೇಳೆಗೆ ಕೆಳದಿ ವೀರಭದ್ರ ನಾಯಕನು ಸೋದೆ ಮತ್ತು ಬೀಳಗಿ ಪಾಳೆಯಗಾರರ ಮೇಲೆ ಆಕ್ರಮಣ ಮಾಡಿದನು. ಹೀಗೆ ಸೋದೆ ಮತ್ತು ಬೀಳಗಿಯವರ ಸಹಾಯಕ್ಕೆ ಬಂದ ಬಿಜಾಪುರದ ನವಾಬನು ವೀರಭದ್ರನಾಯಕನ ಮೇಲೆ ಆಕ್ರಮಣ ಮಾಡಿದನು.[೨೮] ಬಿಜಾಪುರದ ಆದಿಲ್‌ಷಾಹನು ಕೆಳದಿ ಸಂಸ್ಥಾನಕ್ಕೆ ಸೇರಿದ್ದ ಪ್ರಾಂತ್ಯಗಳನ್ನು ಮುತ್ತಿ ಹಾನಗಲ್ಲು, ಗುತ್ತಿ ಪಾಲ್ಬಣ್ಣೆ, ಮಾಸೂರು ಮುಂತಾದ ಪ್ರದೇಶಗಳನ್ನು ಆಕ್ರಮಿಸಿದನು.[೨೯]

ಇಕ್ಕೇರಿಯಲ್ಲಿ ನಡೆಯುತ್ತಿದ್ದ ಇಂತಹ ಅಂತಃಕಲಹ ಮತ್ತು ರಾಜ್ಯದ ಅರಾಜಕತೆಯನ್ನು ತಿಳಿದ ಬಿಜಾಪುರ ಸುಲ್ತಾನನು, ರಣದುಲ್ಲಾಖಾನನನ್ನು ಸೈನ್ಯದೊಡನೆ ಇಕ್ಕೇರಿಗೆ ಕಳುಹಿಸಿದನು. ಈ ವೇಳೆಗೆ ವೀರಭದ್ರನಾಯಕನ ಸ್ಥಿತಿಯು ದುರ್ಬಲವಾಗಿತ್ತು. ಇದರಿಂದ ನಾಯಕನು ಕುಟುಂಬ ಪರಿವಾರದೊಂದಿಗೆ

ಭುವನಗಿರಿ ಕೋಟೆಗೆ ಹೋಗಬೇಕಾಯಿತು.[೩೦] ಅಲ್ಲಿಯೂ ಮತ್ತೆ ಶತ್ರುಗಳು ಬೆನ್ನಟ್ಟಿದಾಗ ವೀರಭದ್ರ ನಾಯಕನಿಗೆ ಶರಣಾಗದೆ ಬೇರೆ ಮಾರ್ಗವೇ ಉಳಿಯಲಿಲ್ಲ. ನಂತರ ಈತನು ಆದಿಲ್‌ಷಾಹಿಯ ಅಧಿಪತ್ಯವನ್ನು ಒಪ್ಪಿ ಬಿಜಾಪುರಕ್ಕೆ ೩೦ ಲಕ್ಷ ಹೊನ್ನುಗಳನ್ನು ಕೊಡಲು ನಿರ್ಧರಿಸಿದನು. ತಕ್ಷಣ ೧೮ ಲಕ್ಷ ಹೊನ್ನುಗಳನ್ನು ಕೊಟ್ಟು ಉಳಿದಿದ್ದನ್ನು ಮೂರು ಕಂತುಗಳಲ್ಲಿ ಕೊಡುವುದಾಗಿ ತಿಳಿಸಿದನು.[೩೧]

ಇಕ್ಕೇರಿಯು ಶಾಲಿವಾಹನ ಶಕವರ್ಷ ೧೫೬೦ನೇ ಈಶ್ವರ ಸಂವತ್ಸರದ ಪುಷ್ಯ ಬಹುಳ(ಳ) ದಶಮಿ (ತಾ.೩೦-೧೨-೧೬೩೭)ಯಲ್ಲಿ ಬಿಜಾಪುರ ಸುಲ್ತಾನನ ದಾಳಿಗೆ ತುತ್ತಾಗಬೇಕಾಯಿತು. ವೀರಭದ್ರನಾಯಕನು ಕ್ರಿ.ಶ.೧೬೩೮ರಲ್ಲಿ ರಾಮಕೃಷ್ಣ ಮತ್ತು ಶಿವಪ್ಪನಾಯಕ[೩೨] ಎಂಬ ದಳಪತಿಗಳ ನಿಯೋಗವನ್ನು ಬಿಜಾಪುರ ಸುಲ್ತಾನನ ಆಸ್ಥಾನಕ್ಕೆ ಕಳುಹಿಸಿ ಒಪ್ಪಂದ ಮಾಡಿಕೊಂಡನು. ಬಿಜಾಪುರದ ಆದಿಲ್‌ಷಾಹನು ಇಕ್ಕೇರಿಯ ಮೇಲೆ ಆಕ್ರಮಣ ನಡೆಸಿದಾಗ ವೀರಭದ್ರನಾಯಕನು ೭ ಲಕ್ಷ ಪ್ರತಾಪಗಳನ್ನು ಕೊಟ್ಟು ಸಂಧಾನ ಮಾಡಿಕೊಂಡನೆಂದು ಇಂಗ್ಲೀಷರ ಕಾಗದ ಪತ್ರಗಳಿಂದ ತಿಳಿಯುತ್ತದೆ. ಸುಲ್ತಾನನ ದಕ್ಷಿಣ ದಂಡಯಾತ್ರೆ ಕುರಿತು ಕೆಳದಿ ನೃಪವಿಜಯದಲ್ಲಿ:

"ಒಡನಿ ಪರಿಯ ಸಮಸ್ತ ಸಂಬೋಗದೆ
ಪಡೆಸಹ ರಣಧೂಳಿಖಾನ
ಬಿಡದೆ ಕರ್ನಾಟ ರಾಜ್ಯವ ಪೊಕ್ಕು ದಾಳಿಯ
ನೀಡುವ ಸಂಭ್ರಮವನೇವೇಳ್ವೆ"[೩೩]

-ಎಂದು ರಣದುಲ್ಲಾಖಾನ್ ಕರ್ನಾಟಕದ ಮೇಲೆ ಆಕ್ರಮಣ ಮಾಡಿದ ಬಗೆಯನ್ನು ಈ ರೀತಿ ವಿವರಿಸಲಾಗಿದೆ.

ಈ ವೇಳೆಗೆ ದೇಶದ ನಾನಾ ಭಾಗಗಳಲ್ಲಿ ಪಾಳೆಯಪಟ್ಟುಗಳನ್ನು ಕಟ್ಟಿಕೊಂಡ ಪಾಳೆಯಗಾರರು ವಿದೇಶಿಯರ (ಆದಿಲ್‌ಷಾಹಿಗಳ) ಸೇನಾ ಸಹಾಯದಿಂದ ತಮ್ಮ ಪಾಳೆಯಪಟ್ಟುಗಳನ್ನು ವಿಸ್ತರಿಸುವ ಹಂಬಲವುಳ್ಳವರಾಗಿದ್ದರು. ಹಿಂದೂ ರಾಜರೊಳಗಿನ ದೌರ್ಬಲ್ಯವೂ ಹಾಗೂ ಅವರ ಆಂತರಿಕ ಕಲಹಗಳು ಮಹಮದೀಯರ ಸೇನೆಗಳಿಗೆ ಪೂರ್ಣ ಕುಂಭದ ಸ್ವಾಗತ ನೀಡಿದವು. ಈ ಸಂದರ್ಭದಲ್ಲಿ ಪಾಳೆಯಗಾರರು ಮಹಮದೀಯರ ಪ್ರಲೋಭನ ಜಾಲಕ್ಕೆ ಬಿದ್ದರು. ಇದರ ಫಲವಾಗಿ ನಾಯಕರು, ಗೌಡರು ಇತ್ಯಾದಿ ಬಿರುದಾಂಕಿತರಾದ ಪಾಳೆಯಗಾರರು ದಿನೇ ದಿನೇ ಪ್ರಾಬಲ್ಯಕ್ಕೆ ಬರತೊಡಗಿದ್ದರಿಂದ ಹಿಂದೂ ರಾಜರ ವಿರುದ್ಧವಾಗಿ ಈ ವಿದೇಶಿಯರನ್ನು ಕೂಡಿಕೊಂಡರು.[೩೪] ಇಂಥದೊಂದು ಅವಕಾಶ ಬಿಜಾಪುರದ ಅರಸರಿಗೆ ಬಂದೊದಗಿತು. ಬಸವಾಪಟ್ಟಣದ ಕೆಂಗನಾಯಕನು ವೀರಭದ್ರನಾಯಕನ ವಿರುದ್ಧ ಬಂಡೆದ್ದಿದ್ದನು. ಇದರಿಂದ ಕೆಂಗನಾಯಕ ಆದಿಲ್‌ಷಾಹಿಗಳ ನೆರವನ್ನು ಕೋರಿದನು. ಕೆಂಗನಾಯಕನಿಗೆ ಸಹಾಯ ಮಾಡಲೆಂದು ಬಂದ ರಣದುಲ್ಲಾಖಾನನೆ ಆತನಿಗೆ ಒಂದು ಲಕ್ಷ ಹಂಸಗಳನ್ನು ಕೊಡುತ್ತೇನೆಂದು ಹೇಳಿ ಇಕ್ಕೇರಿಯ ಸುಲಭ ದಾರಿಯನ್ನು ಕಂಡುಕೊಂಡನು. ಹೀಗೆ ಇಕ್ಕೇರಿ ರಣದುಲ್ಲಾಖಾನನ ದಾಳಿಗೆ ಮೊದಲು ಬಲಿಯಾಗಬೇಕಾಯಿತು.

### ೨.೪.೨. ಮೈಸೂರಿನ ಮೇಲೆ ದಂಡಯಾತ್ರೆ

ಇಕ್ಕೇರಿಯ ಮೇಲಿನ ರಣದುಲ್ಲಾಖಾನನ ದಾಳಿಯಿಂದ ತೃಪ್ತನಾದ ಮಹಮದ್ ಆದಿಲ್‌ಷಾಹನು ಮೈಸೂರನ್ನು ಗೆಲ್ಲಲು ಕ್ರಿ.ಶ.೧೬೩೮ರಲ್ಲಿ ಸೈನ್ಯವನ್ನು ಕಳುಹಿಸಿಕೊಟ್ಟನು. ಬಿಜಾಪುರದ ಸೈನ್ಯ ರಣದುಲ್ಲಾಖಾನನ ನೇತೃತ್ವದಲ್ಲಿ ಮೈಸೂರಿನ ಮೇಲೆ ದಂಡೆತ್ತಿ ಬಂದ ವಿಷಯ ಇತಿಹಾಸ ಪ್ರಸಿದ್ಧವಾದುದು. ಬಿಜಾಪುರ ಸುಲ್ತಾನನ ಕರ್ನಾಟಕದ ಮೇಲಿನ ದಂಡಯಾತ್ರೆಗಳಲ್ಲಿ ಇದು ಎರಡನೆಯದು. ಇಕ್ಕೇರಿಯ ಮೇಲೆ ದಂಡಯಾತ್ರೆ ಕೈಗೊಂಡ ಮಾರನೆಯ ವರ್ಷ ಅಂದರೆ ಕ್ರಿ.ಶ.೧೬೩೮ರಲ್ಲಿ ಕಂಠೀರವ ನರಸರಾಜ ಒಡೆಯರು ಪಟ್ಟಾಧಿಕಾರಕ್ಕೆ ಬಂದರು. ಅದೇ ವರ್ಷ ಈ ಘಟನೆ ಸಂಭವಿಸಿತು ಎಂದು ತಿಳಿದುಬರುತ್ತದೆ.[೩೫] ರಣದುಲ್ಲಾಖಾನನು ಪ್ರಖ್ಯಾತನೂ, ಶೂರನೂ ಆಗಿದ್ದುದರಿಂದ ಸುಲ್ತಾನ ಮಹಮದ್ ಆದಿಲ್‌ಷಾಹನು ಪ್ರೀತಿಯಿಂದ ದಳಪತಿಯನ್ನಾಗಿ ನೇಮಿಸಿದ ವಿಚಾರವನ್ನು ಅಲ್ಲಗಳೆಯುವಂತಿಲ್ಲ. ಈ ಸೈನ್ಯದಲ್ಲಿ ಷಹಜಿ, ವೇದೋಜಿ, ಕನ್ನೋಜಿ, ರಾಘವ ಪಂಡಿತ ಮೊದಲಾದ ಮರಾಠ ನಾಯಕರು ಇದ್ದಾರೆ. ಇವರೆಲ್ಲರೂ ಬಿಜಾಪುರ ಸುಲ್ತಾನನ ಸರದಾರರೆಂದೇ ಹೇಳಬಹುದು.[೩೬] ಅದರಲ್ಲೂ ಮುಖ್ಯವಾಗಿ ಶಿವಾಜಿಯ ತಂದೆಯಾದ ಷಹಜಿಯನ್ನು ದ್ವಿತೀಯ ಸೇನಾಧಿಪತಿಯನ್ನಾಗಿ ಕಳುಹಿಸಲಾಗಿದ್ದುದು ಗೆದ್ದ ಪ್ರದೇಶಗಳಲ್ಲೊಂದನ್ನು ಜಹಗೀರು ಕೊಡುವ ವಾಗ್ದಾನದ ಮೇಲೆ.[೩೭] ಇದರಿಂದ ಷಹಜಿಯು ಖಾನನೊಡಗೂಡಿ ಐವತ್ತು ಸಾವಿರ ಕುದುರೆ, ಐದುನೂರು ಆನೆ, ನಾಲ್ಕು ಲಕ್ಷ ಕಾಲಾಳುಗಳ ಸೈನ್ಯ ಸಮೇತ ದಕ್ಷಿಣದತ್ತ ಹೊರಟನು.[೩೮]

ರಣದುಲ್ಲಾಖಾನ ಮತ್ತು ಷಹಜಿ ಇಬ್ಬರೂ ರಾಜಧಾನಿ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದರು. ಮೈಸೂರಿನ ಒಡೆಯರು ಅಂಥದೊಂದು ದೊಡ್ಡ ಸೈನ್ಯವನ್ನು ಎದುರಿಸಿ ರಾಜಧಾನಿಯನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸಿದರು. ಬಿಜಾಪುರದ ಸೈನ್ಯವು ಕೋಟೆಗೆ ಬಿರುಕು ಹಾಕಿ ಒಳನುಗ್ಗಿದಂತೆ ಮೈಸೂರಿನ ಸೈನ್ಯವು ಒಳಬರುವ ಸೈನಿಕರನ್ನು ಕತ್ತರಿಸಿ ಹಾಕುವಲ್ಲಿ ಯಶಸ್ವಿಯಾಯಿತು. ಅದರಿಂದಾಗಿ ಶತ್ರುಗಳು ತಮ್ಮ ಮುತ್ತಿಗೆಯಿಂದ ಹಿಂದೆ ಸರಿಯಬೇಕಾಯಿತಲ್ಲದೆ, ಹಿಂದೆ ಸರಿದು ಹೋಗುವಾಗಲೂ ಕೂಡಾ ಕಂಠೀರವ ನರಸಿಂಹರಾಜನ ಕೈಯಲ್ಲಿ ಸಾಕಷ್ಟು ಪೆಟ್ಟು ತಿನ್ನಬೇಕಾಯಿತು.[೩೯] ಇದರಿಂದ ಮೈಸೂರಿಗೆ ಫಿರಂಗಿ, ಬಿಲ್ಲುಬಾಣ, ಮದ್ದುಗುಂಡು, ಬಂಗಿಯ ಹೇರು, ಸಾರಾಯಿಗಳ ಪಿಪಾಯಿ ಮುಂತಾದವು ದೊರೆತವು. ಇವೆಲ್ಲವನ್ನು ಹೇರಿಕೊಂಡು ಬರಲು ವ್ಯಾಪಾರಿಗಳು, ಕೊಟ್ಟಾಣಿಗಳು, ಕಮ್ಮಾರರು, ಬೇಹಾರಿಗಳು ಮುಂತಾದವರನ್ನು ಜೊತೆಯಲ್ಲಿ ಕರೆತಂದರು. ಸೈನ್ಯಕ್ಕೆ ಅಗತ್ಯವಾದ ಸಹಾಯಕ್ಕಾಗಿಯೂ ಇಂಥವರನ್ನು ಕರೆತರುತ್ತಿದ್ದರು.[೪೦] ಹೀಗೆ ಮೈಸೂರಿನ ಕಂಠೀರವ ನರಸಿಂಹರಾಜ ಒಡೆಯರು ಬಿಜಾಪುರದ ರಣದುಲ್ಲಾಖಾನನ ಸೈನ್ಯವನ್ನು ಹಿಮ್ಮೆಟ್ಟಿಸಿದರು.

ಕಂಠೀರವನಿಗೂ ರಣದುಲ್ಲಾಖಾನನಿಗೂ ಸಂಭವಿಸಿದ ಯುದ್ಧದಲ್ಲಿ ರಣದುಲ್ಲಾಖಾನನ ಸೈನ್ಯ ಹಿಮ್ಮೆಟ್ಟಿದ ವಿಚಾರ ಮತ್ತು ಖಾನ್ ಮಲ್ಲುಕರೆಲ್ಲಾ ಹನುಮನಾಯಕನನ್ನು ಆಶ್ರಯಿಸಿದ ವಿಚಾರಗಳು ರಾಮೇಗೌಡ ಅವರ 'ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು' ಕೃತಿಯಲ್ಲಿ ಹರಡಿಕೊಂಡಿದೆ. ಕೆಂಗಹನುಮನು ಮಧ್ಯಸ್ಥಿಕೆ ವಹಿಸಿ ಕಂಠೀರವನು ರಣದುಲ್ಲಾಖಾನನನ್ನು ಕ್ಷಮಿಸುವಂತೆ ಮಾಡಿ ಯಾರಿಗೂ ಕಾಣದಂತೆ ಪಾರಾಗುವಂತೆ ರಾಜಾಜ್ಞೆ ಹೊರಡಿಸಿದನೆಂಬ ವಿಚಾರಗಳು ಸಹ ಕಂಡುಬಂದಿವೆ. ಆದರೂ ರಣದುಲ್ಲಾಖಾನನ ಸೈನ್ಯಕ್ಕೆ ಕಂಠೀರವನಿಂದ ಸಾಕಷ್ಟು ಹಾನಿ ಉಂಟಾಗಿದೆ ಎಂಬುದು ಮಾತ್ರ ದೃಢಪಡುವುದು.

ಒಟ್ಟಾರೆ ಬಿಜಾಪುರದಿಂದ ಕರೆದುಕೊಂಡು ಬಂದಿದ್ದ ಮಹಮದೀಯ ಸೈನ್ಯದ ಗೌರವ ಉಳಿಸುವ ಪ್ರಯತ್ನಕ್ಕೆ ಕೆಂಗಹನುಮ ಒಳಗಾದನೆಂಬುದು ಇದರಿಂದ ಪ್ರತೀತವಾಗುವ ವಿಷಯ.

### ೨.೪.೩. ಬಸವಾಪಟ್ಟಣದ ಮೇಲೆ ಆಕ್ರಮಣ

ಮಹಮದ್ ಆದಿಲ್‌ಷಾಹನ ಸೇನಾಪತಿ ರಣದುಲ್ಲಾಖಾನನು ಮೈಸೂರಿನ ಮೇಲೆ ಆಕ್ರಮಣ ಮಾಡಿ ಸೋತನು. ನಂತರ ಬಿಜಾಪುರಕ್ಕೆ ಹಿಂತಿರುಗುವ ದಾರಿಯಲ್ಲಿ ಚಿಕ್ಕನಾಯಕನಹಳ್ಳಿಯಲ್ಲಿ ಶಿಬಿರ ಹೂಡಿದ್ದನು. ಅಲ್ಲಿ ಪಲ್ಲಕ್ಕಿ ಹೊರಲು ಆಳುಗಳನ್ನು ಕಳುಹಿಸಿಕೊಡಬೇಕೆಂದು ಪಾಳೆಯಗಾರ ಭೈರಪ್ಪನಾಯಕನಿಗೆ ಸಂದೇಶವನ್ನು ಕಳುಹಿಸಿದನು. ಆದರೆ ಭೈರಪ್ಪನಾಯಕನು ಅವನ ಆದೇಶವನ್ನು ಪಾಲಿಸದೆ, "ಮೈಸೂರು ರಾಜನು ನಮಗೆ ಮಿತ್ರರೆಂದು ಹೇಳಿ, ನೀವೂ ಅವರ ಮೇಲೆ ಆಕ್ರಮಣ ಮಾಡಿ ನೀವು ನಮಗೂ ಶತ್ರುಗಳಾಗಿದ್ದೀರಿ, ಆದ್ದರಿಂದ ನಿಮಗೆ ಯಾವುದೇ ಬಗೆಯ ಸಹಾಯವನ್ನು ನೀಡುವುದಿಲ್ಲ" ಎಂದನು. ಇದರಿಂದ ಕ್ರೋಧತಪ್ತನಾದ ರಣದುಲ್ಲಾಖಾನನು ಬಿಜಾಪುರಕ್ಕೆ ಹೋಗಿ ಮತ್ತೆ ಬಾರೀ ಸೈನ್ಯದೊಂದಿಗೆ ಬಂದು ಬಸವಾಪಟ್ಟಣದ ಮೇಲೆ ಮುತ್ತಿಗೆ ಹಾಕಿದನು.[೪೧] ಈ ವೇಳೆಗೆ ಕೆಂಗಪ್ಪನಾಯಕನ ತರುವಾಯ ಇಮ್ಮಡಿ ಕೆಂಗಹನುಮಪ್ಪನು ಅನಂತರ ಅವನ ಮಗ ಕೆಂಗ ನಿಚ್ಚಮದುವಣಿಗ ಹನುಮಪ್ಪನು ಕ್ರಿ.ಶ.೧೫೮೧ರಲ್ಲಿ ಅವನ ಇಬ್ಬರು ಮಕ್ಕಳಾದ ಹಿರೇ ಕೆಂಗಹನುಮ ಮತ್ತು ಚಿಕ್ಕ ಕೆಂಗಹನುಮರು ಪಟ್ಟಕ್ಕೆ ಬಂದರು. ಇವರು ಬಾಣಾವರ, ಬಸವಾಪಟ್ಟಣಗಳನ್ನು ಆಡಳಿತ ಕೇಂದ್ರಗಳನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದರು.[೪೨]

ಹೀಗೆ ಹಿರೇ ಕೆಂಗಹನುಮನಾಯಕ ಶಾಲಿವಾಹನ ಶಕವರ್ಷ ೧೫೦೩ನೇ (ಕ್ರಿ.ಶ.೧೫೮೧) ವಿಶು ಸಂವತ್ಸರದಿಂದ ಶಾ|ಶ|೧೫೫೦ನೇ ಬಹುಧಾನ್ಯ ಸಂವತ್ಸರದವರೆಗೆ ಬಸವಾಪಟ್ಟಣ, ಸಂತೆಬೆನ್ನೂರು ಈ ಎರಡೂ ಪ್ರಾಂತ್ಯಗಳನ್ನು ಒಟ್ಟಿಗೆ ಆಳುತ್ತಿದ್ದನು. ಈ ಕಾಲದಲ್ಲಿ ಭಾಗಾನಗರದ (ಬಿಜಾಪುರ) ದಂಡನಾಯಕ ರಣದುಲ್ಲಾಖಾನನು ಬಾರೀ ದಂಡು ತೆಗೆದುಕೊಂಡು ಬಂದು ಸಂತೆಬೆನ್ನೂರು ನಾಯಕರ ಕುಲದೇವರಾದ ರಾಮಚಂದ್ರ ದೇವಸ್ಥಾನ, ಕಲ್ಲೇಶ್ವರ ದೇವಸ್ಥಾನ, ಸಿದ್ಧನಮಠದ ರಾಮೇಶ್ವರ

ದೇವಸ್ಥಾನಗಳನ್ನು ಮುರಿದುದಲ್ಲದೆ, ನಂತರ ಸಂತೆಬೆನ್ನೂರಿನಲ್ಲಿದ್ದ ೬೪ ಅಂಕಣದ ದೇವಸ್ಥಾನ ಇದ್ದ ಜಾಗದಲ್ಲಿ ಒಂದು ಮಸೀದಿ ಕಟ್ಟಿಸಲು ಜನರನ್ನು ನೇಮಿಸಿದನು.[೪೩] ಹಿರೇ ಕೆಂಗಹನುಮನು ಬಿಜಾಪುರ ಸುಲ್ತಾನನ ವಿರುದ್ಧ ದಂಗೆಯೆದ್ದಾಗ ಇದೇ ಸಮಯವನ್ನು ಕಾಯುತ್ತಿದ್ದ ವೀರಭದ್ರನಾಯಕನು ತರೀಕೆರೆ ಮತ್ತು ಬಸವಾಪಟ್ಟಣವನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದ. ಆದರೆ ಈ ವೇಳೆಗಾಗಲೇ ರಣದುಲ್ಲಾಖಾನನು ಕೆಂಗಹನುಮನನ್ನು ಸೆರೆ ಹಿಡಿದು ತನ್ನ ಕಡೆಯವನಾದ ಮುರ್ತುಜಾ ಬೇಗನನ್ನು ಬಸವಾಪಟ್ಟಣಕ್ಕೆ ನೇಮಿಸಿದನು. ಬಿಜಾಪುರಕ್ಕೆ ಹೋಗುವಾಗ್ಗೆ ಹೊದಿಕೆರೆಯಲ್ಲಿ ಮಸೀದಿಯನ್ನು ಕಟ್ಟಿಸುವಂತೆ ಆಜ್ಞೆ ಮಾಡಿ ಕೆಂಗಹನುಮನನ್ನು ಕರೆದುಕೊಂಡು ಹೋದನು. ನಂತರ ಹಿರೇ ಕೆಂಗಹನುಮನಾಯಕನು ಸುಲ್ತಾನನ ಮೆಚ್ಚುಗೆಗೆ ಪಾತ್ರನಾಗಿ 'ಸರ್ಜಾ' ಎಂಬ ಕಿತ್ತಾಬು ಪಡೆಯುವುದರ ಜೊತೆಗೆ ಸಂತೆಬೆನ್ನೂರು ಮತ್ತು ಬಸವಾಪಟ್ಟಣದ ಆಡಳಿತವನ್ನು ಮರಳಿ ಪಡೆದನು.[೪೪] ಹೀಗೆ ಬಸವಾಪಟ್ಟಣಕ್ಕೆ ಹಿಂತಿರುಗಿ ಬಂದನಂತರ ಸರ್ಜಾ ಹನುಮಪ್ಪನಾಯಕನ ದೃಷ್ಟಿ ಸಂತೆಬೆನ್ನೂರಿನ ಮೊಗಲರತ್ತ ಹರಿಯಿತು. ಅಲ್ಲಿ ಬಿಜಾಪುರದವರು ಕಟ್ಟಿಸುತ್ತಿದ್ದ ಮಸೀದಿಯನ್ನು ಇವನು ಅಪವಿತ್ರಗೊಳಿಸಿದ್ದರಿಂದ 'ಪುಂಡ ಹನುಮಪ್ಪನಾಯಕ'ನೆಂಬ ಖ್ಯಾತಿಗೆ ಪಾತ್ರನಾದನು.[೪೫] ಮುಂದೆ ಚಿಕ್ಕ ಕೆಂಗಹನುಮನಾಯಕನು ಬಿಜಾಪುರ ಸುಲ್ತಾನರ ಅಧೀನ ಅರಸನಾಗಿ ಅವರೊಡನೆ ಕೆಳದಿ, ಚಿತ್ರದುರ್ಗ, ಸಿರಾ, ಹಾಗಲವಾಡಿ, ಬೆಂಗಳೂರು ಮುಂತಾದ ಕಡೆಗಳಲ್ಲಿ ನಡೆದ ಯುದ್ಧದಲ್ಲಿ ಭಾಗವಹಿಸಿದ್ದನೆಂದು ತಿಳಿದುಬರುತ್ತದೆ.[೪೬]

ಅನಂತರ ಚಿಕ್ಕನಾಯಕನಹಳ್ಳಿಯ ಪಾಳೆಯಗಾರನಾದ ಭೈರಪ್ಪನಾಯಕನನ್ನು ರಣದುಲ್ಲಾಖಾನನು ಸೋಲಿಸಿದನು. ಸೋತ ನಾಯಕನು ಖಾನನಿಗೆ ೨/೩ ಭಾಗ ರಾಜ್ಯವನ್ನು ಕೊಟ್ಟು ಚಿಕ್ಕನಾಯಕನಹಳ್ಳಿಯನ್ನು ಒಪ್ಪಿಸಿ ಸಂಧಿ ಮಾಡಿಕೊಂಡನು. ಈ ಪರಾಭವದ ನಂತರ ಭೈರಪ್ಪನಾಯಕನು ತನ್ನ ಕುಟುಂಬ ಮತ್ತು ಮಿತ್ರರೊಂದಿಗೆ ಹಾಗಲವಾಡಿಗೆ ಹೋಗಿ ಅಲ್ಲಿಂದ ಆಳತೊಡಗಿದನು.[೪೭]

ಗೋವಿಂದ ವೈದ್ಯ ಹೇಳುವ ಇಕ್ಕೇರಿಯ ರಾಜ-ಕೆಂಗಮನ್ನೆಯರ ಪ್ರಸಂಗ ನಿಜವಾಗಿ ನಡೆದುದಾಗಿದ್ದು, ಹಲವು ಇತಿಹಾಸಕಾರರಿಂದ ಉಲ್ಲೇಖಿತವಾಗಿದೆ. ಕವಿ ಹೇಳುವ ಇಕ್ಕೇರಿಯ ರಾಜ ಕ್ರಿ.ಶ.೧೬೨೯ ರಿಂದ ೧೬೪೫ರವರೆಗೆ ಆಳಿದವನು ವೀರಭದ್ರನಾಯಕನೇ ಆಗಿದ್ದಾನೆ. ಕೆಂಗಹನುಮ ಬಸವಾಪಟ್ಟಣದ ಹನುಮಪ್ಪನಾಯಕನಾಗಿರಬಹುದು. ಬಿಜಾಪುರ ಸೈನ್ಯ ದಾಳಿ ಮಾಡುವಂತೆ ಸ್ವಾಗತಿಸಿದವರು ಬಸವಾಪಟ್ಟಣ ಅಥವಾ ತರೀಕೆರೆಯ ಪಾಳೆಯಗಾರನಾಗಿರಬಹುದೆಂದು ಬಿ.ಎಲ್.ರೈಸ್ ಮತ್ತು ಹಯವದನರಾವ್ ರವರು ಅಭಿಪ್ರಾಯಪಡುತ್ತಾರೆ. ರತ್ನಗಿರಿ ಅಥವಾ ಸಿರಾದ ಪಾಳೆಯಗಾರನಿಂದ ತನಗಾದ ಅವಮಾನದ ಸೇಡನ್ನು ತೀರಿಸಿಕೊಳ್ಳಲು ಅವನು ಹೀಗೆ ಮಾಡಿದನೆಂದು ಅವರು ಕೊಡುವ ಕಾರಣ. ಈ ಘಟನೆ ಸಂಭವಿಸಿದ್ದು ಕ್ರಿ.ಶ.೧೬೩೭ರಲ್ಲಿ ಎಂಬುದಾಗಿ ಇತಿಹಾಸಕಾರರು ಸೂಚಿಸಿದ್ದಾರೆ.[೪೮] ಹೀಗೆ ಬಿಜಾಪುರದ ಸೇನಾಧಿಪತಿ ರಣದುಲ್ಲಾಖಾನನು ದಕ್ಷಿಣ ದಂಡಯಾತ್ರೆಯಲ್ಲಿ ತೊಡಗಿದನು.

## ೨.೪.೪. ಸಿರಾದ ಮೇಲೆ ಆಕ್ರಮಣ

ಕರ್ನಾಟಕ-ಬಿಜಾಪುರ-ಬಾಲ್ಘಾಟ್‌ಗಳ ಆಯಕಟ್ಟಿನ ಪ್ರದೇಶವಾಗಿದ್ದ ಸಿರಾದಲ್ಲಿ ಪಾಳೆಯಗಾರರು ನೆಲೆಸಿದ್ದರು. ಕ್ರಿ.ಶ.೧೫೬೫ರ ತಾಳಿಕೋಟೆಯ ಯುದ್ಧದ ನಂತರ ಬಿಜಾಪುರ ಮತ್ತು ಗೋಲ್ಕಂಡ ಸುಲ್ತಾನರುಗಳು ತುಂಗಭದ್ರಾ ನದಿಯ ದಕ್ಷಿಣ ಭೂ ಪ್ರದೇಶದ ಮೇಲೆ ಪದೇ ಪದೇ ದಾಳಿ ನಡೆಸತೊಡಗಿದರು.[೪೯]

ಮಹಮದ್ ಆದಿಲ್‌ಷಾಹನು ಇಕ್ಕೇರಿಯ ವೀರಭದ್ರನಾಯಕ, ಬಸವಾಪಟ್ಟಣ, ಚಿಕ್ಕನಾಯಕನಹಳ್ಳಿ ಆಕ್ರಮಣದ ನಂತರ ರಣದುಲ್ಲಾಖಾನನೊಂದಿಗೆ ಷಹಜಿಯನ್ನು ಕಳುಹಿಸಿ, ಪೂರ್ವಕ್ಕೆ ದಂಡಯಾತ್ರೆ ಕೈಗೊಳ್ಳಲು ಆಜ್ಞೆ ಮಾಡಿದನು. ರಣದುಲ್ಲಾಖಾನನು ತುಂಗಭದ್ರಾ ನದಿಯನ್ನು ದಾಟಿ ಅಧೋನಿಯತ್ತ ಸಾಗಿದನು. ಅವನ ದೃಷ್ಟಿ ತಾಡಪತ್ರಿಯ ಮೇಲೆ ಇತ್ತು. ಆದರೆ ತಾಡಪತ್ರಿಯ ಮಾನ್ಯವರನು ಕೆಂಗನಾಯಕನ ಸ್ನೇಹಿತನಾಗಿದ್ದುದರಿಂದ ಆತ ತನ್ನ ಸಂರಕ್ಷಣೆಗಾಗಿ ಕೆಂಗನಾಯಕನನ್ನೇ ಕೋರಿದನು. ಕೆಂಗನಾಯಕನು ರಣದುಲ್ಲಾಖಾನನಿಗೆ ಮಿತ್ರನಾಗಿದ್ದುದರಿಂದ ತಾಡಪತ್ರಿಯ ಕಡೆ ಹೋಗುವುದು ಕಠಿಣವೆಂದೂ, ದಾರಿಯು ದಟ್ಟ ಅರಣ್ಯದೊಂದಿಗೆ ದುರ್ಗಮವಾಗಿದೆಯೆಂದು ಹೇಳಿ ಆತನ ದೃಷ್ಟಿಯನ್ನು ಬೆಂಗಳೂರಿನತ್ತ ಹರಿಯುವಂತೆ ಮಾಡಿದನು. ಜೊತೆಗೆ ಬೆಂಗಳೂರಿನ ಕೆಂಪೇಗೌಡನು ಮತ್ತು ಆತನ ಹತ್ತಿರವಿರುವ ಸಂಪತ್ತು ಲೋಕ ಪ್ರಸಿದ್ಧವಾಗಿದೆ ಎಂದು ಹೇಳುವುದರ ಮೂಲಕ ತಾಡಪತ್ರಿಯತ್ತ ಹೋಗದಂತೆ ಕೆಂಗನಾಯಕನು ನೋಡಿಕೊಂಡನು.[೫೦] ಇದರಿಂದ ರಣದುಲ್ಲಾಖಾನನು ಬೆಂಗಳೂರು ಮಾರ್ಗದಲ್ಲಿದ್ದ ಸಿರಾದ ಮೇಲೆ ಆಕ್ರಮಣ ಮಾಡಲು ಮುಂದಾದನು.

ಹೀಗೆ ಸಿರಾ ಪ್ರದೇಶಕ್ಕೆ ಸಂಬಂಧಪಟ್ಟ ಕಥನಕಾವ್ಯವೊಂದು ಹೀಗಿದೆ. ಸಿರಾದ ಪಾಳೆಯಗಾರನಾದ ರಂಗಪ್ಪರಾಜನು ಹಿಂದೆ ಈ ಪ್ರಾಂತ್ಯದಲ್ಲಿ ಬೀಡು ಬಿಟ್ಟಿರಬೇಕಾದರೆ ರಂಗನಾಥ ದೇವರ ಕನಸಾಯಿತು. ಮರುದಿನ ಅದೇ ಜಾಗದಲ್ಲಿ ಬೇಟೆಯಾಡುತ್ತಿರುವಾಗ ಮೊಲವೊಂದು ರಂಗಪ್ಪರಾಜನ ಬೇಟೆ ನಾಯಿಯ ಮೇಲೆರಗಿ ಬಂದಿತು. ಇದರಿಂದ ಈ ಪ್ರದೇಶವನ್ನು ಗಂಡು ಭೂಮಿಯೆಂದು ತಿಳಿಯಲಾಯಿತು. ಅನಂತರ ಆ ಸ್ಥಳದಲ್ಲಿ ರಂಗಪ್ಪರಾಜನಿಗೆ ಹೇರಳ ದ್ರವ್ಯವೂ ಸಿಕ್ಕಿತು. ಕಾಲಾನುಕ್ರಮದಲ್ಲಿ ಈ ಪ್ರದೇಶ ಸೀರ್ಯ ಪಾಳೆಯ ಪಟ್ಟೆನಿಸಿ ಗಂಡು ಮೆಟ್ಟಿನ ನಾಡಾಗಿ ಕೋಟೆಕೊತ್ತಲು ನಿರ್ಮಾಣವಾಯಿತು.

ತರೀಕೆರೆಯ ಪೊವ್ವಲ ಕೆಂಗಣ್ಣನಾಯಕನೆಂಬುವನು ಸಿರಾದ ರಂಗಪ್ಪನಾಯಕನ ಅತ್ತೆಯ ಮಗ. ಈತನು ಸಿರಾದಲ್ಲಿ ನಡೆದ ಒಂದು ಹಬ್ಬದ ಸಮಾರಂಭಕ್ಕೆ ಆಹ್ವಾನಿತನಾಗಿರುತ್ತಾನೆ. ಹಬ್ಬದೂಟದ ನಂತರ ಇಬ್ಬರೂ ಚಾವಡಿಯಲ್ಲಿ ಕುಳಿತು ದಾಯ ಪಗಡೆಯಾಡುತ್ತಾರೆ. ಕೆಂಗಣ್ಣನಾಯಕನು ಪಗಡೆಯಾಟದ ಸಂದರ್ಭದಲ್ಲಿ ಈ ರೀತಿ ಹೇಳುತ್ತಾನೆ. "ಆಟದಲ್ಲಿ ನಾನು ಸೋತರೆ ನನ್ನ ರಾಜ್ಯ ಕೊಡುವೆ, ನೀನು ಸೋತರೆ ನಿನ್ನ ತಂಗಿ ರಂಗೋಜಿಯನ್ನು ಒಪ್ಪಿಸಬೇಕು" ಎಂದು ಮಾತಾಯಿತು. ಜೂಜಾಟದಲ್ಲಿ

ಕೆಂಗಣ್ಣನಾಯಕನೇ ಗೆಲ್ಲುತ್ತಾನೆ. ಅಲ್ಲದೇ ಗೆದ್ದು ಅಸಭ್ಯವಾಗಿ ವರ್ತಿಸುತ್ತಾನೆ. ಆಗ ರಂಗಪ್ಪನಾಯಕ ಮತ್ತು ಅವನ ತಂಗಿ ರಂಗೋಜಿ ಈರ್ವರೂ ಕೆಂಗಣ್ಣನಾಯಕನ ಮೇಲೆ ಸೇಡು ತೀರಿಸಿಕೊಳ್ಳುವ ಉಪಾಯ ಹೂಡುತ್ತಾರೆ. ರಂಗಪ್ಪನಾಯಕನು ಕೃತಕ ಆಧಾರಾಭಿಮಾನಗಳಿಂದ ಕೆಂಗಣ್ಣನಾಯಕರನ್ನು ಕರೆದುಕೊಂಡು ಬರುತ್ತಾನೆ. ತಂಗಿಯು ನೀರು ಕೊಡುವಾಗ ಸುಡು ನೀರನ್ನು ಆತನ ಕೈಕಾಲುಗಳ ಮೇಲೆ ಸುರಿದು ಬಿಡುತ್ತಾಳೆ. ಇದರಿಂದ ಅವಮಾನಗೊಂಡ ಕೆಂಗಣ್ಣನಾಯಕನು ತುರುಕರೊಡನೆ ಕೂಡಿ ಮಸಲತ್ತು ಮಾಡುತ್ತಾನೆ. ಹೀಗಾಗಿ ಪೊವ್ವಲ ಕೆಂಗಣ್ಣನಾಯಕನಿಗೂ ಸಿರಾದ ರಂಗಪ್ಪನಾಯಕನಿಗೂ ಯುದ್ಧವಾಗಿ ಯುದ್ಧದಲ್ಲಿ ರಂಗಪ್ಪನಾಯಕನು ಮಡಿಯುತ್ತಾನೆ[೫೧] ಎಂದು ಕೃಷ್ಣಮೂರ್ತಿ ಹನೂರುರವರು 'ಜನಪದ ಕಥನ ಗೀತೆಗಳಲ್ಲಿ ಪಾಳೆಯಗಾರರು' ಎಂಬ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.

ಪೊವ್ವಲ ಕೆಂಗಣ್ಣ ಮತ್ತು ರಂಗಪ್ಪನಾಯಕರ ಪಂದ್ಯದ ಪ್ರಸಂಗವನ್ನು ಜಾನಪದ ಗೀತೆಗಳಲ್ಲಿಯೂ ಕಾಣಬಹುದು.

ಸೀರ್ಯೆದ | ರಂಗಣ್ಣ | ಪೊವ್ವಲ | ಕೆಂಗಣ್ಣ
ಅವರಿಬ್ಬರಿಗೊಂದು | ಪಡುಸಾಲೆ |
ಅವರಿಬ್ಬರಿಗೊಂದು | ಚಾವಡಿ | ಪಡಸಾಲೆ | ಅದರೊಳಗಿನ್ನು | ದಾಯ ಪಗಡೇಯ | ನಾಡ್ಯಾರೆ|

ನಾ ಸೋತರೆ | ನನ್ನ ರಾಯದುರ್ಗ | ಕೊಡತೀನಿ
ನೀ ಸೋತರೆ | ನಿನ್ನ ತಂಗಿ | ರಂಗೋಜಿಯ |
ನೀ ಸೋತರೆ ನಿನ್ನ ತಂಗಿ | ರಂಗೋಜಿಯ ಇಷ್ಟಾರ್ಥ | ಸಲ್ಲಿಸಲು ಬಿಡಬೇಕು||

ಹೀಗೆ ಹಬ್ಬದೂಟದ ಆನಂದದಲ್ಲಿದ್ದ ಪೊವ್ವಲ ಕೆಂಗಣ್ಣ ಮತ್ತು ರಂಗಪ್ಪನಾಯಕರ ಪಗಡೆಯಾಟ ಪಂದ್ಯದ ಪ್ರಸಂಗವನ್ನು ಎಚ್.ವಿ.ವೀರನಾಯಕ ಅವರು 'ಗುಮ್ಮಳ್ಳಿ ಕದನ'ದಲ್ಲಿ ವಿವರಿಸಿದ್ದಾರೆ.[೫೨] ಅಂತಿಮವಾಗಿ ಪೊವ್ವಲ ಕೆಂಗಣ್ಣ ತುರುಕರೊಡನೆ ರಂಗಪ್ಪನಾಯಕನ ವಿರುದ್ಧ ಮಸಲತ್ತು ಮಾಡುತ್ತಾನೆ.

ಕೆಂಗನಾಯಕನ ಸಲಹೆಯಂತೆ ರಣದುಲ್ಲಾಖಾನನು ಬೆಂಗಳೂರು ದಾರಿಯಲ್ಲಿಯ ಕೋಟೆಗಳನ್ನು ವಶಪಡಿಸಿಕೊಳ್ಳಲು ಅಫ್‌ಜಲ್‌ಖಾನನನ್ನು ಮುಂದೆ ಕಳುಹಿಸಿದನು. ಸಿರಾ ಕೋಟೆಯ ಒಡೆಯನಾದ ಕಸ್ತೂರಿ ರಂಗಪ್ಪನಾಯಕನು ಕೋಟೆಯಿಂದ ಹೊರ ಬಂದು ಅಫ್‌ಜಲ್‌ಖಾನನೊಂದಿಗೆ ಒಪ್ಪಂದ ಮಾಡಿಕೊಳ್ಳಲು ಪ್ರಯತ್ನಿಸಿದನು. ಆದರೆ ಅಫ್‌ಜಲನು ಕಸ್ತೂರಿ ರಂಗಪ್ಪನಾಯಕನನ್ನು ವಂಚಿಸಿ, ವಿಶ್ವಾಸದಿಂದ ಮಾತನಾಡಲು ಹತ್ತಿರ ಬರುತ್ತಿದ್ದಂತೆಯೇ ಕೊಂದುಬಿಟ್ಟನು. ಅನಂತರ ಸಿರಾ ಕೋಟೆಯ ಒಳಗೆ ನುಗ್ಗಲು ಮುಂದಾದನು. ಕೋಟೆಯ ಒಳಗಿನ ನಾಯಕರು ತಮ್ಮ ಒಡೆಯನ ಸಾವಿನ ಸೇಡನ್ನು ತೀರಿಸಿಕೊಳ್ಳಲು ಸಿದ್ಧರಾಗುತ್ತಿದ್ದಂತೆ, ಬಿಜಾಪುರ ಸೈನ್ಯವು ಸಹ ಕೋಟೆಯನ್ನು ವಶಪಡಿಸಿಕೊಳ್ಳಲು ದೃಢ ನಿಶ್ಚಯ ಮಾಡಿತು. ಅಫ್‌ಜಲ್‌ಖಾನನ ಸೈನ್ಯವು ಹೊರಡುತ್ತಿದ್ದಂತೆ ರಣದುಲ್ಲಾಖಾನನ ಮುಖ್ಯ ಸೇನೆಯೂ ಬಂದು ಕೂಡಿಕೊಂಡಿತು. ಸಿರಾದ ನಾಯಕರು ಜೀವದ ಮೇಲಿನ ಹಂಗು ತೊರೆದು

ಹೋರಾಡಿದರಾದರೂ, ಕೊನೆಗೂ ಸಿರಾ ಕೋಟೆಯು ಬಿಜಾಪುರದ ವಶವಾಯಿತು.[೫೩] ಹೀಗೆ ರಣದುಲ್ಲಾ ಖಾನನು ಸಿರಾ ಕೋಟೆಯನ್ನು ವಶಪಡಿಸಿಕೊಂಡನು.

ಸೀರೆಯವನೂ ಸೂರೆ ಮಾಡಿಯಾ ಭೂಪನ
ಸೇರಿಸಿ ಯಮನ ಪಟ್ಟಣಕೆ
ವಾರುವ ದಳಸಹ ರಣಧೂಳೀಖಾನ ಮುಂ
ದೋರಂತೆ ನಡೆದನುಬ್ಬಿನಲಿ[೫೪]

ಹೀಗೆ ರಣದುಲ್ಲಾಖಾನನು ಸಿರಾವನ್ನು ಸೂರೆ ಮಾಡಿದನೆನ್ನಲಾಗಿದೆ. ಬಿಜಾಪುರ ರಾಜ್ಯವು ಸಿರಾದಿಂದ ತುಂಗಭದ್ರಾ ನದಿಯವರೆಗೂ ಭೀಮ ನದಿಯಿಂದ ಸಾಗರ ಪರ್ಯಂತವೂ ವ್ಯಾಪಿಸಿದ್ದಿತು. ತುಂಗಭದ್ರಾ ನದಿಯಿಂದ ದಕ್ಷಿಣಕ್ಕಿರುವ ಅದವಾನಿಯು ಪ್ರಾಯಶಃ ನಂದ್ಯಾಲ ಪ್ರಾಂತ್ಯವೂ ಕೂಡಾ ಬಿಜಾಪುರ ರಾಜ್ಯಕ್ಕೆ ಸೇರಿದ್ದಿತು. ಬಿಜಾಪುರಕ್ಕೂ ವಿಜಯನಗರಕ್ಕೂ ಪದೇ ಪದೇ ಘರ್ಷಣೆಗಳು ಸಂಭವಿಸಿ ಕೊನೆಗೆ ಬಿಜಾಪುರ ಸೇನೆಗಳು ಕ್ರಿ.ಶ.೧೫೭೭ರಲ್ಲಿ ಪೆನುಗೊಂಡೆಯನ್ನು ಕಬಳಿಸಲೆಣಿಸಿ ವಿಫಲವಾದದ್ದು ನಿಜವಷ್ಟೆ. ಆದರೆ ಮುಂದೆ ಕ್ರಿ.ಶ.೧೬೩೭ರಲ್ಲಿ ಭೀಕರ ಆಕ್ರಮಣ ನಡೆಸಿದ ಆದಿಲ್‌ಶಾಹಿಗಳು ಜಯಶೀಲರಾದರು.[೫೫]

ರಣರಸಿಕನಾದ ರಣದುಲ್ಲಾಖಾನನು ಬಿಜಾಪುರದ ಸೇನಾಧಿಪತಿಯಾಗಿದ್ದನು. ಇವನ ಬಲಗೈ ಬಂಟನಾಗಿ ಶಿವಾಜಿಯ ತಂದೆ ಷಹಜಿಯು ಹೊರಟಿದ್ದನು. ಪರಾಜಿತ ಪ್ರದೇಶಗಳನ್ನು ಜಹಗೀರು ನೀಡುವುದಾಗಿ ಸುಲ್ತಾನನು ವಚನ ನೀಡಿದ್ದ ಕಾರಣ ಸೇನಾಧಿಕಾರಿಗಳ ಸಮರೋತ್ಸಾಹ ದ್ವಿಗುಣಿತವಾಗಿದ್ದಿತು. ಶೂರಧೀರರಾದ ದಳಪತಿಗಳ ನೇತೃತ್ವದಲ್ಲಿ ಬಿಜಾಪುರದ ಸೇನೆಯು ಬಂಕಾಪುರ, ಹರಿಹರ, ಬಸವಾಪಟ್ಟಣ ಮತ್ತು ತರೀಕೆರೆ ಪಾಳೆಯಪಟ್ಟುಗಳನ್ನು, ಕೊನೆಗೆ ಅರಣ್ಯ ನಿಬಿಡ ಬಿದನೂರನ್ನು ವಶಪಡಿಸಿಕೊಂಡಿತು. ಈ ವೇಳೆಗೆ ಸಿರಾದ ಪಾಳೆಯಗಾರನೊಡನೆ ವೈಮನಸ್ಸು ಉಂಟಾದ ಕಾರಣ ತರೀಕೆರೆಯ ಅರಸನು ಸ್ವತಃ ತಾನೇ ಬಿಜಾಪುರದ ಸೇನೆಗಳಿಗೆ ಆಕ್ರಮಣ ನಡೆಸಲು ಆಹ್ವಾನ ನೀಡಿದ್ದನು.

ಹೀಗೆ ಬಿಜಾಪುರದ ಸೈನ್ಯವು ದಕ್ಷಿಣದ ದಿಗ್ವಿಜಯ ಕಾರ್ಯವನ್ನು ಪೂರ್ತಿಗೊಳಿಸಿತು. ನಂತರ ಸುಲ್ತಾನನು ವಶಪಡಿಸಿಕೊಂಡ ಬೆಂಗಳೂರು, ಹೊಸಕೋಟೆ, ಕೋಲಾರ, ಬಸವಾಪಟ್ಟಣ, ದೊಡ್ಡಬಳ್ಳಾಪುರ, ಸಿರಾ ಈ ಪ್ರಾಂತ್ಯಗಳನ್ನು ಒಟ್ಟುಗೂಡಿಸಿ ಷಹಜಿಗೆ ಜಹಗೀರಾಗಿ ನೀಡಿದನು. ಈ ಕಾಲಕ್ಕೆ ಷಹಜಿಯು ಕೆಳಗಣ ಘಟ್ಟಗಳಾದ ಕರ್ನಾಟಕ-ಬಿಜಾಪುರ-ಪಾಯಂಘಾಟ್ ಪ್ರಾಂತ್ಯದ ಮಂಡಲಾಧಿಪತಿಯಾಗಿದ್ದನು. ಬಿಜಾಪುರ ಸುಲ್ತಾನನು ನಾನಾ ಪಾಳೆಯಪಟ್ಟುಗಳನ್ನು ಸ್ವಾಧೀನ ಪಡಿಸಿಕೊಂಡು ರಾಜ್ಯಾದಾಯವನ್ನು ವಿನಿಯೋಗಿಸುವ ಕಾಲಕ್ಕೆ, ಪರಾಜಿತರಾದ ಪಾಳೆಯಗಾರರಿಗೆ ಅವರವರ ಪ್ರಾಂತ್ಯದೊಳಗಿನ ಅಷ್ಟೊಂದು ಲಾಭದಾಯಕವಲ್ಲದ ಬಹುಭಾಗವನ್ನು ಅವರವರಿಗೆ ಪುನಃ ನೀಡುತ್ತಿದ್ದನು. ಇದರಿಂದ ಕೃಷಿ ಯೋಗ್ಯವಲ್ಲದ ಭೂಮಿ ಸಾಗುವಳಿಯಾಗುತ್ತಿತ್ತು. ಇದರಿಂದ ಬೇರೆ ಬೇರೆ ಕಡೆಯ ಜನ ಅಲ್ಲಿಗೆ ಬಂದು ನೆಲೆಸಲು

ಅನುಕೂಲವಾಗಿದ್ದಿತು. ಹೀಗೆ ಬಿಜಾಪುರ ಸುಲ್ತಾನನು ಬಸವಾಪಟ್ಟಣ ಮತ್ತು ಬೆಂಗಳೂರನ್ನು ಇಟ್ಟುಕೊಂಡು ತರೀಕೆರೆಯನ್ನು ಬಿಟ್ಟುಕೊಟ್ಟನು. ಮಾಗಡಿಯನ್ನು ಕೆಂಪೇಗೌಡನಿಗೆ ಕೊಟ್ಟನು. ಹಾಗೆಯೇ ಸಿರಾವನ್ನು ಇಟ್ಟುಕೊಂಡು ರತ್ನಗಿರಿಯನ್ನು ಹಿಂದಕ್ಕೆ ನೀಡಿದ.[೫೬]

'ಗುಮ್ಮಳ್ಳಿ ಕದನ'ದಲ್ಲಿ ವಿವರಿಸುವಂತೆ ಮುಸ್ಲಿಮರ ದಂಡು ಸಿರಾವನ್ನು ವಶಪಡಿಸಿಕೊಂಡಿದ್ದು, ಕ್ರಿ.ಶ.೧೬೩೭ರಲ್ಲಿ. ಆ ಸಮಯಕ್ಕೆ ದೊಡ್ಡೇರಿಯನ್ನು ಆಳುತ್ತಿದ್ದ ತಿಮ್ಮಣ್ಣನಾಯಕನು ದೊಡ್ಡೇರಿಯನ್ನು ಬಿಟ್ಟು ನಿಡಗಲ್ಲಿಗೆ ತೆರಳಿ ಸಿರಾದ ಆಡಳಿತವನ್ನು ಒಪ್ಪಿ, ಮೂರು ಸಾವಿರ ಪಗೋಡಗಳನ್ನು ಕೊಡಲು ಒಪ್ಪಿದನೆಂದು ತಿಳಿದುಬರುತ್ತದೆ.[೫೭] ತಿಮ್ಮಣ್ಣನಾಯಕನ ಬಗ್ಗೆ ಖಚಿತ ವಿವರಗಳಿಲ್ಲ. ಆದರೆ ಸಿರಾದಲ್ಲಿನ ಹಿಂದೂ ಪಾಳೆಯಗಾರರ ಸ್ವತಂತ್ರ ಆಳ್ವಿಕೆ ಬಿಜಾಪುರದವರ ಮುತ್ತಿಗೆಯಿಂದ ಕೊನೆಗೊಂಡಿತೆಂದು ಹೇಳಲು ಸಾಧ್ಯವಿದೆ.

ಏರು ಮುಖವಾಗಿದ್ದ ರತ್ನಗಿರಿಯ ಪ್ರಗತಿಗೆ ದೊಡ್ಡ ಹೊಡೆತ ಬಿದ್ದದ್ದು ಕ್ರಿ.ಶ.೧೬೩೮ರಲ್ಲಿ. ಆ ಸಂದರ್ಭದಲ್ಲಿ ಸಿರಾ ಕೇಂದ್ರವಾಗಿದ್ದ ರತ್ನಗಿರಿ ರಾಜ್ಯವನ್ನು ಆಳುತ್ತಿದ್ದವನು ದೊಡ್ಡ ಕಸ್ತೂರಿ ರಂಗಪ್ಪರಾಜನ ಮೊಮ್ಮಗ ಸರ್ಜಾ ರಂಗಪ್ಪರಾಜ. ಈತನಿಗೂ ಬಸವಾಪಟ್ಟಣದ ಹನುಮನಾಯಕನಿಗೂ ಮನಸ್ತಾಪವಿತ್ತೆಂದೂ, ಅದರಿಂದ ಹನುಮನಾಯಕ ಬಿಜಾಪುರದ ಮಹಮದ್ ಆದಿಲ್‌ಷಾಹನ ಸೇನಾಪತಿ ರಣದುಲ್ಲಾಖಾನನ ಸಹಾಯ ಯಾಚಿಸಿದನು. ಇದರಿಂದ ಖಾನನು ಶಿವಾಜಿಯ ತಂದೆ ಷಹಜಿಯ ಜೊತೆ ಸೇರಿಕೊಂಡು ದಕ್ಷಿಣ ದಂಡಯಾತ್ರೆಗೆ ಬಂದಾಗ ಸಿರಾ ಪಟ್ಟಣದ ಮೇಲೆ ದಾಳಿ ನಡೆಯಿತು ಎಂದು ಬಿ.ಎಲ್.ರೈಸ್ ಮತ್ತು ಹಯವದನರಾವ್ ಅಭಿಪ್ರಾಯಪಡುತ್ತಾರೆ. ರಂಗಪ್ಪರಾಜ ಈ ದಾಳಿಯನ್ನು ಬಲವಾಗಿ ಪ್ರತಿಭಟಿಸಿದನಾದರೂ ಪ್ರಯೋಜನವಾಗದೇ ಅವನು ಯುದ್ಧದಲ್ಲಿ ಮರಣ ಹೊಂದುತ್ತಾನೆ. ಕೊನೆಗೆ ಸಿರಾ ಕೋಟೆ ಲೂಟಿಯಾಗುತ್ತದೆ.

ಬಿಜಾಪುರ ಸುಲ್ತಾನ ಮಹಮದ್ ಆದಿಲ್‌ಷಾಹನ ಪ್ರತಿನಿಧಿಯಾಗಿ ಮಲ್ಲಿಕ್‌ರಿಹಾನ್‌ನನ್ನು ಸಿರಾದ ನವಾಬನಾಗಿ ನೇಮಿಸಿ ರಣದುಲ್ಲಾಖಾನ್ ಹಿಂದಿರುಗುತ್ತಾನೆ. ಹೀಗೆ ರತ್ನಗಿರಿ ರಾಜ್ಯ ಕ್ರಿ.ಶ.೧೬೩೮ ರಿಂದ ೧೬೫೧ರವರೆಗೆ ಮುಸ್ಲಿಂ ಆಡಳಿತಕ್ಕೆ ಒಳಪಡುತ್ತದೆ.[೫೮] ಅವರು ಸಿರಾದಿಂದ ಆಳಲ್ಪಡು ತ್ತಾರೆ. ನಂತರ ಹಿರೇಗೌಡನು ಮುಮ್ಮಡಿ ಚಿಕ್ಕಭೂಪನ ನೆರವಿನಿಂದ ರತ್ನಗಿರಿ ೫೦೦೦ ಸೀಮೆಯನ್ನು ಮುಸ್ಲಿಮ್ ಆಳ್ವಿಕೆಯಿಂದ ಬಿಡಿಸಿಕೊಂಡು ಅಣ್ಣ-ತಮ್ಮಂದಿರನ್ನು ರತ್ನಗಿರಿಯಲ್ಲಿ ನೆಲೆ ನಿಲ್ಲಿಸಿದನೆನ್ನ ಲಾಗಿದೆ.[೫೯] ಆದರೆ ಈ ಅಂಶಗಳಿಗೆ ಸರಿಯಾದ ಆಧಾರಗಳು ಇಲ್ಲದಿರುವುದರಿಂದ ಊಹಾಪೋಹವಾಗಿ ಕಂಡುಬರುತ್ತದೆ. ಒಟ್ಟಾರೆ ಮಹಮದ್ ಆದಿಲ್‌ಷಾಹನು ಸಾಧ್ಯವಾದಷ್ಟು ಮಟ್ಟಿಗೆ ಕರ್ನಾಟಕದ ಬಹುಭಾಗಗಳನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳುವುದಕ್ಕೆ ಆಸೆಪಟ್ಟನು ಎಂದು ಹೇಳಬಹುದು.

**ಅಡಿ ಟಿಪ್ಪಣಿಗಳು**

೧. ನಾಯಕ ಹಾ.ಮಾ.,(ಸಂ), ಕನ್ನಡ ವಿಷಯ ವಿಶ್ವಕೋಶ, ೧೯೭೯, ಪು.೧೪೧೦

೨. ಲಕ್ಷ್ಮಣ್ ತೆಲಗಾವಿ., (ಸಂ), ಹರಿತಿಸಿರಿ, ೧೯೮೭, ಪು.೩೦೬

೩. ಅದೇ, ಪು.೩೦೭

೪. ಅದೇ, ಪು.೩೦೪

೫. ವೀರನಾಯಕ ಎಚ್.ವಿ., ಗುಮ್ಮನಹಳ್ಳಿ ಕದನ, ೧೯೮೩, ಪು.೧

೬. ಲಕ್ಷ್ಮಣ್ ತೆಲಗಾವಿ.,(ಸಂ), ಹರತಿಸಿರಿ, ೧೯೮೭, ಪು.೩೦೪

೭. ಅದೇ, ಪು.೩೦೫

೮. ಯೋಗೀಶ್ವರಪ್ಪ ಡಿ.ಎನ್., 'ಸಿರಾದ ನವಾಬರು', (ಇತಿಹಾಸ ದರ್ಶನ, ಸಂಪುಟ ೧೩), ೧೯೯೮, ಪು.೨೭೩

೯. ಎಪಿಗ್ರಾಫಿಯಾ ಕರ್ನಾಟಿಕ ೧೨, ಸಿರಾ, ಶಾಸನ ೩೮

೧೦. ಶ್ರೀನಿವಾಸ್ ಎಂ.ವಿ. ಲಕ್ಷ್ಮಣ್ ತೆಲಗಾವಿ.,(ಸಂ) ಚಂದ್ರವಳ್ಳಿ, ೧೯೭೫, ಪು.೧೯

೧೧. ಎಪಿಗ್ರಾಫಿಯ ಕರ್ನಾಟಿಕ ೧೨, ಸಿರಾ, ಶಾಸನ ೭

೧೨. ಶಿವತಾರಕ್ ಕೆ.ಬಿ., ನಿಡಗಲ್ಲು ಚೋಳರು (ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಸಂ: ವಸು ಎಂ.ವಿ.), ೨೦೦೧, ಪು.೧೮

೧೩. ಎಪಿಗ್ರಾಫಿಯಾ ಕರ್ನಾಟಿಕ XI, ಮೊಳಕಾಲ್ಮೂರು, ಶಾಸನ ೨೦

೧೪. ಎಪಿಗ್ರಾಫಿಯಾ ಕರ್ನಾಟಿಕ XII, ಸಿರಾ, ಶಾಸನ ೩೪

೧೫. ಕೃಷ್ಣರಾವ್ ಎಂ.ವಿ., ಕೇಶವಭಟ್ಟ ಎಂ.,(ಸಂ), ಕರ್ನಾಟಕ ಇತಿಹಾಸ ದರ್ಶನ, ೧೯೭೦, ಪು.೨೧೫

೧೬. ವೀರನಾಯಕ ಎಚ್.ವಿ., ಗುಮ್ಮನಹಳ್ಳಿ ಕದನ, ೧೯೮೩, ಪು.೨

೧೭. ಶ್ರೀನಿವಾಸ್ ಎಂ.ವಿ., ಲಕ್ಷ್ಮಣ್ ತೆಲಗಾವಿ.,(ಸಂ), ಚಂದ್ರವಳ್ಳಿ, ೧೯೭೫, ಪು.೬೬

೧೮. ಲಕ್ಷ್ಮಣ್ ತೆಲಗಾವಿ.,(ಸಂ), ಹರತಿಸಿರಿ, ೧೯೮೭, ಪುಟ ೨೯೪

೧೯. ವೀರನಾಯಕ ಎಚ್.ವಿ., ಗುಮ್ಮನಹಳ್ಳಿ ಕದನ, ೧೯೮೩, ಪು.೨

೨೦. ಕೊರಟಿ ಶ್ರೀನಿವಾಸರಾವ್., ಬೆಂಗಳೂರಿನ ಭಾಗ್ಯ, ೨೦೦೪, ಪು.೬೫, ೬೬, ೬೭

೨೧. ವೀರನಾಯಕ ಎಚ್.ವಿ., ಗುಮ್ಮನಹಳ್ಳಿ ಕದನ, ೧೯೮೩, ಪು.೨-೩

೨೨. ಕುಲಕರ್ಣಿ ಜಿ.ಟಿ., ದಿ ಮೊಗಲ್ -ಮರಾಠ ರಿಲೇಷನ್ಸ್ : ಟ್ವೆಂಟಿ ಫೈವ್ ಫೇಟ್ ಫುಲ್ ಇಯರ್ಸ್, ೧೯೮೩, ಪು.೧೧೮

೨೩. ಯೋಗೀಶ್ವರಪ್ಪ ಡಿ.ಎನ್., ಹಾಗಲವಾಡಿ ಪಾಳೆಯಗಾರರು, ೨೦೦೧, ಪು.೩೮

೨೪. ಕೃಷ್ಣ ಕೊಲ್ಹಾರ ಕುಲಕರ್ಣಿ., ಬಿಜಾಪುರ ಆದಿಲ್ ಷಾಹಿ, ೨೦೦೨, ಪು.೧೩೧

೨೫. ಶ್ರೀನಿವಾಸರಾಜು ಚಿ. ಬಸವರಾಜ ಕಲ್ಗುಡಿ., (ಸಂ), **ಕರ್ನಾಟಕ ಸಂಗಾತಿ**, ೨೦೦೨, ಪು.೧೨೫

೨೬. ಕೃಷ್ಣ ಕೊಲ್ಹಾರ ಕುಲಕರ್ಣಿ., **ಪೂರ್ವೋಕ್ತ**, ೨೦೦೨, ಪು.೧೦೬

೨೭. ಕೃಷ್ಣರಾವ್ ಎಂ.ವಿ. ಕೇಶವಭಟ್ಟ ಎಂ., (ಸಂ), **ಕರ್ನಾಟಕ ಇತಿಹಾಸ ದರ್ಶನ**, ೧೯೭೦, ಪು.೪೪೦

೨೮. ಅದೇ, ಪು.೪೪೪

೨೯. ಅದೇ, ಪು.೪೪೨

೩೦. ಕಲಬುರ್ಗಿ ಎಂ.ಎಂ. ರಾಮಭಟ್ಟ ಬಿ.ಎಸ್., (ಸಂ), **ಕೆಳದಿ ಸಂಸ್ಥಾನ ಸಮಗ್ರ ಅಧ್ಯಯನ**, ೧೯೯೯, ಪು.೧೩೫

೩೧. ಕೃಷ್ಣ ಕೊಲ್ಹಾರ ಕುಲಕರ್ಣಿ., **ಪೂರ್ವೋಕ್ತ**, ೨೦೦೨, ಪು.೧೩೧

೩೨. ಕಲ್ಲಾಪುರ ಜೆ.ವಿ., **ಕೆಳದಿ ಇತಿಹಾಸದಲ್ಲಿ ಮೈಸೂರರಸರು**, (ಇತಿಹಾಸದರ್ಶನ ಸಂಪುಟ-೯), ೧೯೯೪, ಪು.೧೫೫

೩೩. ರಾಮಶಾಸ್ತ್ರಿ ಆರ್.,(ಸಂ), **ಕಂಠೀರವ ನರಸರಾಜ ವಿಜಯ**, ೧೯೭೧, ಪು.೨೦೮, ಸಂಧಿ ೧೧

೩೪. ಕೃಷ್ಣರಾವ್ ಎಂ.ವಿ. ಕೇಶವಭಟ್ಟ ಎಂ., (ಸಂ), **ಪೂರ್ವೋಕ್ತ**, ೧೯೭೦, ಪು.೪೫೫

೩೫. ರಾಮೇಗೌಡ., **ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು**, ೧೯೯೨, ಪು.೩೦೬

೩೬. ಅದೇ, ಪು.೩೦೭

೩೭. ದಿವಾಕರ ರಂ.ರಾ.,(ಸಂ), **ಕರ್ನಾಟಕ ಪರಂಪರೆ ಸಂಪುಟ-೨**, ೧೯೭೦, ಪು.೩೦೭

೩೮. ರಾಮಾಶಾಸ್ತ್ರಿ ಆರ್.,(ಸಂ), **ಕಂಠೀರವ ನರಸರಾಜ ವಿಜಯ**, ೧೯೭೧, ಪು.೨೦೯, ಸಂಧಿ ೧೧, ಪದ್ಯ ೧೧

೩೯. ಕೃಷ್ಣ ಕೊಲ್ಹಾರ ಕುಲಕರ್ಣಿ., **ಪೂರ್ವೋಕ್ತ**, ೨೦೦೨, ಪು.೧೩೩

೪೦. ರಾಮೇಗೌಡ., **ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು**, ೧೯೯೨, ಪು.೩೦೮

೪೧. ಶಿವಣ್ಣ ಕೆ.ಎಸ್.,(ಸಂ), **ಕರ್ನಾಟಕ ಚರಿತ್ರೆ ಸಂಪುಟ-೩**, ೧೯೯೭, ಪು.೯೦

೪೨. ಶ್ರೀನಿವಾಸ್ ಎಂ.ವಿ. ಲಕ್ಷ್ಮಣ್ ತೆಲಗಾವಿ.,(ಸಂ), **ಚಂದ್ರವಳ್ಳಿ**, ೧೯೭೫, ಪು.೭೭

೪೩. ಕಲಬುರ್ಗಿ ಎಂ.ಎಂ.,(ಸಂ), **ಕರ್ನಾಟಕ ಕೈಫಿಯತ್ತುಗಳು**, ೧೯೯೪, ಪು.೪೨೮

೪೪. ಅದೇ, ಪು.೨೧೨, ೪೨೭

೪೫. ಶ್ರೀನಿವಾಸ್ ಎಂ.ವಿ. ಲಕ್ಷ್ಮಣ್ ತೆಲಗಾವಿ.,(ಸಂ), **ಪೂರ್ವೋಕ್ತ**, ೧೯೭೫, ಪು.೭೭

೪೬. ರಾಜಾರಾಮ ಹೆಗ್ಗಡೆ. ಅಶೋಕ್ ಶೆಟ್ಟರ್., (ಸಂ), ಮಲೆಕರ್ನಾಟಕದ ಅರಸು ಮನೆತನಗಳು, ೨೦೦೧, ಪು.೨೫೪

೪೭. ಶಿವಣ್ಣ ಕೆ.ಎಸ್.,(ಸಂ), **ಕರ್ನಾಟಕ ಚರಿತ್ರೆ**, ಸಂಪುಟ-೩, ೧೯೯೭, ಪು.೯೧

೪೮. ರಾಮೇಗೌಡ., ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು, ೧೯೯೨, ಪು.೩೦೬

೪೯. ಲಕ್ಷ್ಮಣ್ ತೆಲಗಾವಿ.,(ಸಂ), **ಹರತಿಸಿರಿ**, ೧೯೮೭, ಪು.೨೭೧

೫೦. ಕೃಷ್ಣ ಕೊಲ್ಹಾರ ಕುಲಕರ್ಣಿ., **ಪೂರ್ವೋಕ್ತ**, ೨೦೦೨, ಪು.೧೩೨

೫೧. ಲಕ್ಷ್ಮಣ್ ತೆಲಗಾವಿ., (ಸಂ), **ಪೂರ್ವೋಕ್ತ**, ೧೯೮೭, ಪು.೯೦೦

೫೨. ವೀರನಾಯಕ ಎಚ್.ವಿ., ಪೂರ್ವೋಕ್ತ, ೧೯೮೩, ಪು.೨

೫೩. ಕೃಷ್ಣ ಕೊಲ್ಹಾರ ಕುಲಕರ್ಣಿ., ಪೂರ್ವೋಕ್ತ, ೨೦೦೨, ಪು.೧೩೨

೫೪. ರಾಮಾಶಾಸ್ತ್ರಿ ಆರ್.,(ಸಂ), ಕಂಠೀರವನರಸರಾಜ ವಿಜಯ, ೧೯೭೧, ಪು.೨೦೮, ಸಂಧಿ ೧೧

೫೫. ಕೃಷ್ಣರಾವ್ ಎಂ.ವಿ. ಕೇಶವಭಟ್ಟ ಎಂ.,(ಸಂ), ಪೂರ್ವೋಕ್ತ, ೧೯೭೦, ಪು.೫೨೦

೫೬. ಅದೇ, ಪು.೫೨೨

೫೭. ಅಭಿಶಂಕರ್ ಕೆ.,(ಸಂ), ಮೈಸೂರು ಗ್ಯಾಸೆಟಿಯರ್, ತುಮಕೂರು ಡಿಸ್ಟ್ರಿಕ್ಟ್, ೧೯೬೯, ಪು.೧೮೯

೫೮. ಯಾಸಿನ್ ಖುದ್ದೋಸಿ. ಸೀತಾರಾಮ ಜಾಗೀರ್‌ದಾರ್,(ಸಂ)., ಕರ್ನಾಟಕದ ಪರ್ಶಿಯನ್ ಅರಾಬಿಕ್ ಮತ್ತು ಉರ್ದು ಶಾಸನಗಳು, ೨೦೦೧, ಪು.೨೭೨

೫೯. ವಸು ಎಂ.ವಿ.,(ಸಂ), ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ೨೦೦೧, ಪು.೨೬೬

ಅಧ್ಯಾಯ-೩

# ಸಿರಾದ ನವಾಬರ ಆಳ್ವಿಕೆಯ ವಿಭಿನ್ನ ಹಂತಗಳು

೩.೧. ಮಲ್ಲಿಕ್ ರಿಹಾನ್(ಕ್ರಿ.ಶ.೧೬೩೭-೧೬೫೧)

೩.೨. ಷಹಜಿ ಮತ್ತು ಆದಿಲ್‌ಷಾಹಿಗಳು(ಕ್ರಿ.ಶ.೧೬೫೧-೧೬೬೪)

೩.೩. ಖಾಸಿಂಖಾನ್(ಕ್ರಿ.ಶ.೧೬೮೭-೧೬೯೮)

೩.೪. ಜುಲ್ಫಿಕರ್‌ಖಾನ್(ಕ್ರಿ.ಶ.೧೬೯೮-೧೭೦೦)

೩.೫. ಫಡದುಲ್ಲಾಖಾನ್(ಕ್ರಿ.ಶ.೧೭೦೬)

೩.೬. ಅಬ್ದುಲ್ ನಭೀ ತಾಹರ್‌ಖಾನ್(ಕ್ರಿ.ಶ.೧೭೨೪-೧೭೪೨)

೩.೭. ದಿಲಾವರ್ ಖಾನ್(ಕ್ರಿ.ಶ.೧೭೪೨-೧೭೫೬)

೩.೮. ಹೈದರಾಲಿ ಮತ್ತು ಟಿಪ್ಪು(ಕ್ರಿ.ಶ.೧೭೬೧-೧೭೯೯)

# ಅಧ್ಯಾಯ-೩

## ಸಿರಾದ ನವಾಬರ ಆಳ್ವಿಕೆಯ ವಿಭಿನ್ನ ಹಂತಗಳು

ತಾಳಿಕೋಟೆಯ ಯುದ್ಧದ ನಂತರ ಬಿಜಾಪುರದ ಆದಿಲ್‌ಷಾಹಿಗಳು ವಿಜಯನಗರ ಸಾಮ್ರಾಜ್ಯದ ಅಧೀನ ಪ್ರದೇಶಗಳ ಮೇಲೆ ಹತೋಟಿ ಹೊಂದಲು ಒಂದು ಶತಮಾನವೇ ಬೇಕಾಯಿತು. ಆದಿಲ್‌ಷಾಹಿಗಳ ವಿಸ್ತರಣಾ ನೀತಿಗೆ ಪಾಳೆಯಗಾರರು ನಿರಂತರವಾಗಿ ತಡೆಯೊಡ್ಡಿದರು. ಅವರನ್ನು ಹತೋಟಿಗೆ ತೆಗೆದುಕೊಳ್ಳಲು ಆದಿಲ್‌ಷಾಹಿಗಳು ಒಂದಾದ ಮೇಲೊಂದರಂತೆ ಸೈನ್ಯವನ್ನು ಕಳುಹಿಸತೊಡಗಿದರು. ಆದರೆ ಈ ಎಲ್ಲಾ ದಾಳಿಗಳು ಯಶಸ್ವಿಯನ್ನೇನು ಕಾಣಲಿಲ್ಲ. ನಂತರ ಬಿಜಾಪುರದ ಸುಲ್ತಾನರು ದಕ್ಷಿಣ ಕರ್ನಾಟಕದ ಕೆಲವು ಪ್ರದೇಶಗಳನ್ನು ವಶಪಡಿಸಿಕೊಳ್ಳಲು ಮುಂದಾದರು.

ಮಹಮದ್ ಆದಿಲ್‌ಷಾಹನು ಕ್ರಿ.ಶ.೧೫೭೩ರ ನಂತರ ಮಧ್ಯೆ ಮತ್ತು ದಕ್ಷಿಣ ಕರ್ನಾಟಕ ಪ್ರದೇಶದ ಮೇಲೆ ಆಕ್ರಮಣವನ್ನು ಆರಂಭಿಸಿದ. ಅವನಿಗೆ ಧಾರವಾಡ, ಬಂಕಾಪುರ, ಜರ್‍ರೆ, ಚಂದ್ರಗುತ್ತಿಗಳನ್ನು ವಶಪಡಿಸಿಕೊಳ್ಳುವುದೇನು ಕಷ್ಟವಾಗಿರಲಿಲ್ಲ. ಈ ಕೋಟೆಗಳ ಮೇಲ್ವಿಚಾರಣೆಯಲ್ಲಿದ್ದ ನಾಯಕರು ಬಿಜಾಪುರದ ಸೈನ್ಯವನ್ನು ಬಲವಾಗಿ ಎದುರಿಸಿದರೂ ಅಂತ್ಯದಲ್ಲಿ ಶರಣಾಗತರಾಗಿ ಕಪ್ಪಕೊಡಲು ಒಪ್ಪಿಕೊಂಡರು. ಇದು ವಿಸ್ತರಣೆಯ ಮುಖ್ಯವಾದ ಅಂಶ. ಅರವೀಡು ರಾಜಧಾನಿಯಾದ ಪೆನುಗೊಂಡೆಯ ಆಕ್ರಮಣ ಆರಂಭದಲ್ಲಿ ವಿಫಲವಾದರೂ ನಂತರ ಅವರ ಉದ್ದೇಶಿತ ಫಲ ಕೈಗೂಡಿತು. ಇದರಿಂದ ಶ್ರೀರಂಗನು ದುರ್ಬಲಗೊಂಡನು. ಅವನ ಅಸಹಾಯಕತೆಯನ್ನು ಕಂಡು ಅನುಕಂಪದಿಂದ ಕೆಲವರು ಆದಿಲ್‌ಷಾಹಿ ಆಕ್ರಮಣಗಳನ್ನು ತಾತ್ಕಾಲಿಕವಾಗಿ ಹಿಂದಕ್ಕೆ ತಳ್ಳುವಲ್ಲಿ ಯಶಸ್ವಿಯಾದರು. ಆದರೆ ಕ್ರಿ.ಶ.೧೫೭೬ರ ಯುದ್ಧದಲ್ಲಿ ಶ್ರೀರಂಗನು ಭೀಕರವಾಗಿ ಸೋಲನ್ನನುಭವಿಸಿದನು. ಈ ಯುದ್ಧದಿಂದ ಪೆನುಗೊಂಡೆಯ ಉತ್ತರ ಭಾಗಗಳೆಲ್ಲಾ ಬಿಜಾಪುರದ ಆದಿಲ್‌ಷಾಹಿಗಳ ವಶವಾದವು. ಈ ಪ್ರದೇಶದಲ್ಲಿ ಬರುವ ಸಿರಾ ಬಿಜಾಪುರದ ಅಂಗವಾಯಿತು. ಈ ಕಾಲದ ಆಳ್ವಿಕೆಯನ್ನು ಕುರಿತ ಕೆಲವು ಸುಳಿವುಗಳು ಸಿರಾದಲ್ಲಿ ದೊರೆಯುತ್ತವೆ. ಪರ್ಶಿಯನ್ ಶಾಸನವೊಂದರ ಪ್ರಕಾರ ನಜೀಬ್‌ಖಾನ್ ಅಹ್ರಾರಿ ಸಿರಾದ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದು ಹಲವು ಜನಹಿತ ಕಾರ್ಯಗಳನ್ನು ಮಾಡಿದನು. ಮಲ್ಲಿಕ್ ರಿಹಾನ್ ಆಳ್ವಿಕೆಗೆ ಬರುವವರೆಗೆ ಸಿರಾದ ಮೇಲೆ ಕಸ್ತೂರಿ ರಂಗನ ಹಿಡಿತವೇ ಹೆಚ್ಚಾಗಿದ್ದು, ಬಿಜಾಪುರದ ಸುಲ್ತಾನರ ಸಾಧಾರಣ ಆಳ್ವಿಕೆ ಇದ್ದಿತು.[೧]

ಕರ್ನಾಟಕದಲ್ಲಿ ಬಿಜಾಪುರ ಸುಲ್ತಾನರ ರಾಜ್ಯವು ಸಿರಾದಿಂದ ತುಂಗಭದ್ರಾ ನದಿಯವರೆಗೆ ವಿಸ್ತರಿಸಿತ್ತು. ಈ ಸಂತತಿಯ ಸುಲ್ತಾನರು ದಕ್ಷರೂ, ಸಮರ್ಥರೂ ಆಗಿದ್ದು, ಧಾರ್ಮಿಕ ಸಹಿಷ್ಣತ ಭಾವನೆಯನ್ನು ಹೊಂದುವುದರ ಜೊತೆಗೆ ಒಳ್ಳೆಯ ಆಡಳಿತವನ್ನು ನಡೆಸಿದರು. ೧೬ನೇ ಶತಮಾನದ ಅಂತ್ಯದಲ್ಲಿ ಆಳಿದ ೨ನೇ ಇಬ್ರಾಹಿಂ ಆದಿಲ್‌ಷಾಹನು ಒಬ್ಬ ಅಸಾಧಾರಣವಾದ ಪ್ರತಿಭಾವಂತ ಸುಲ್ತಾನನಾಗಿದ್ದನು. ಈತನು ಮತಾಂಧನಾಗಿರದೆ, ಹಿಂದೂಗಳಿಗೂ, ಕ್ರೈಸ್ತರಿಗೂ ಪ್ರೋತ್ಸಾಹ ನೀಡಿದನು. ಆದ್ದರಿಂದ ಇವನಿಗೆ ಹಿಂದೂಗಳು 'ಜಗದ್ಗುರು' ಎಂಬ ಬಿರುದನ್ನು ಕೊಟ್ಟಿದ್ದರು. ಅವನ ನಂತರ ಆಳಿದ ಮಹಮದ್ ಆದಿಲ್‌ಷಾಹನು ಮೊಗಲ್ ಚಕ್ರವರ್ತಿ ಷಹಜಹಾನನೊಂದಿಗೆ ಸಂಧಿ ಮಾಡಿಕೊಂಡನು[೨] ಎಂದು ಶ್ರೀನಿವಾಸ್ ಎಂ.ವಿ.ಅವರು 'ಚಿತ್ರದುರ್ಗ ಜಿಲ್ಲೆಯಲ್ಲಿ ಬಿಜಾಪುರ ಹಾಗೂ ಮೊಗಲರ ಆಳ್ವಿಕೆ' ಎಂಬ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.

ಮಹಮದ್ ಆದಿಲ್‌ಷಾಹನು ಉತ್ತರದಲ್ಲಿ ಆದ ನಷ್ಟವನ್ನು ಸರಿದೂಗಿಸಿಕೊಳ್ಳಲು ಮತ್ತು ಮೊಗಲರ ಬೇಡಿಕೆಯನ್ನು ಪೂರೈಸಲು ನಿರಂತರ ಕಂದಾಯ ಸಂಗ್ರಹವಾಗಬೇಕಿದ್ದಿತು.[೩] ಇದರಿಂದ ಮಹಮದ್ ಆದಿಲ್‌ಷಾಹನು ರಣದುಲ್ಲಾಖಾನ್ ಎಂಬ ದಳಪತಿಗೆ 'ರುಸ್ತುಂ-ಎ-ಜಮಾನ್' ಎಂಬ ಬಿರುದನ್ನು ನೀಡಿ ಪ್ರೋತ್ಸಾಹಿಸುವುದರ ಮೂಲಕ ಹಾಗೂ ಮರಾಠ ಸರದಾರ ಷಹಜಿಯ ಸಹಾಯದಿಂದ ಕರ್ನಾಟಕದ ಅನೇಕ ಪ್ರಾಂತ್ಯಗಳನ್ನು ವಶಪಡಿಸಿಕೊಂಡನು. ಈ ವೇಳೆಗೆ ಇಕ್ಕೇರಿಯಿಂದ ಜಿಂಜಿಯವರೆಗೂ ಇದ್ದ ಅನೇಕ ಪ್ರದೇಶಗಳು ಮತ್ತು ವಿಜಯನಗರದ ಸಾಮಂತರಾಗಿದ್ದ ಪಾಳೆಯಗಾರರು ಬಿಜಾಪುರದ ಸುಲ್ತಾನರ ಅಧೀನಕ್ಕೆ ಬಂದರು. ಈ ವೇಳೆಯಲ್ಲಿ ಬಿಜಾಪುರ ರಾಜ್ಯವು ವಿಸ್ತರಿಸಲ್ಪಟ್ಟಿತು.[೪]

## ೩.೧. ಮಲ್ಲಿಕ್ ರಿಹಾನ್(ಕ್ರಿ.ಶ.೧೬೩೭-೧೬೫೧)

ಮಲ್ಲಿಕ್ ರಿಹಾನನು ಬಿಜಾಪುರದ ಮಹಮದ್ ಆದಿಲ್‌ಷಾಹನ ಆಜ್ಞಾನುಸಾರ ಸಿರಾದ ಗೌರ್ನರ್ ಆಗಿ ಅಧಿಕಾರಕ್ಕೆ ಬಂದನು. ಈತನು ಸಹದಂಡನಾಯಕನಾಗಿ ಮತ್ತು ದಂಡನಾಯಕನಾಗಿಯೂ ಕಾರ್ಯ ನಿರ್ವಹಿಸಿದನು. ಸುನ್ನಿ ಮುಸಲ್ಮಾನನಾಗಿದ್ದ ಈತನು ಖುರಾನಿನ ನೀತಿ ಸಂಹಿತೆಗಳನ್ನು ತನ್ನ ಆಡಳಿತದಲ್ಲಿ ಅಳವಡಿಸಿಕೊಂಡನು.

### ಸಹದಂಡನಾಯಕನಾಗಿ ಮಲ್ಲಿಕ್ ರಿಹಾನ್

ಮಹಮದ್ ಆದಿಲ್‌ಷಾಹನು ಸೇನಾದಂಡನಾಯಕನಾದ ರಣದುಲ್ಲಾಖಾನನ ಜೊತೆ ಸಹ ದಂಡನಾಯಕನಾಗಿ ಮಲ್ಲಿಕ್ ರಿಹಾನನ್ನು ನೇಮಿಸಿದನು. ಇಬ್ಬರೂ ವಿಶೇಷ ಸಾಮರ್ಥ್ಯವನ್ನು ಹೊಂದಿದ್ದು, ಹಲವು ಯುದ್ಧಗಳ ಅನುಭವ ಪಡೆದಿದ್ದರು. ಈ ಸಂದರ್ಭದಲ್ಲಿ ಇಕ್ಕೇರಿಯಲ್ಲಿ ವೀರಭದ್ರನಾಯಕ ಆಳ್ವಿಕೆ ನಡೆಸುತ್ತಿದ್ದನು. ಇವನು ದುರ್ಬಲನಾಗಿದ್ದರಿಂದ, ಇಕ್ಕೇರಿ ಸಂಸ್ಥಾನವನ್ನು ರಣದುಲ್ಲಾಖಾನ್

ಮತ್ತು ಮಲ್ಲಿಕ್ ರಿಹಾನರು ಆಕ್ರಮಿಸಿದರು. ಅವರು ಇಕ್ಕೇರಿಯ ಮೇಲೆ ದಾಳಿ ಮಾಡಿದಾಗ ಎದುರಿಸಲಾಗದೆ ವೀರಭದ್ರನಾಯಕನು ಭುವನಗಿರಿ ಕೋಟೆಯಲ್ಲಿ ಆಶ್ರಯ ಪಡೆದನು. ಬಿಜಾಪುರ ಸೈನ್ಯ ಅಲ್ಲಿಗೂ ಅಟ್ಟಿಸಿಕೊಂಡು ಹೋಗಿ ಶರಣಾಗುವಂತೆ ಮಾಡಿತು. ಇದರಿಂದ ವೀರಭದ್ರನಾಯಕ ೧೮ ಲಕ್ಷ ರೂ. ಹಣವನ್ನು ಕೊಡಲು ಒಪ್ಪಿದನಲ್ಲದೆ, ಅರ್ಧದಷ್ಟು ರಾಜ್ಯವನ್ನು ಬಿಟ್ಟುಕೊಟ್ಟನು. ಇಂತಹ ಸಂದರ್ಭದಲ್ಲಿ ಮಲ್ಲಿಕ್ ರಿಹಾನನು ಇಕ್ಕೇರಿಯ ಮೇಲೆ ಮಾಡಿದ ಲೂಟಿಯಿಂದ ಅಪಾರ ಐಶ್ವರ್ಯವನ್ನು ಗಳಿಸಿದುದಲ್ಲದೆ ಸೈನಿಕವಾಗಿ ಅವನ ಸ್ಥಾನಮಾನ, ಭವಿಷ್ಯ ಎಲ್ಲವೂ ಹೆಚ್ಚಿದವು.

'ಕಂಠೀರವ ನರಸರಾಜ ವಿಜಯ'ವು ಬಿಜಾಪುರ ಸುಲ್ತಾನನ ಸೈನ್ಯ ಕರ್ನಾಟಕದ ಮೇಲೆ ಮಾಡಿದ ಹಲವಾರು ದಾಳಿಗಳನ್ನು ಕುರಿತು ಹೇಳುತ್ತದೆ. ರಣದುಲ್ಲಾಖಾನನು ಕರ್ನಾಟಕಕ್ಕೆ ಪ್ರವೇಶಿಸುವ ವಿಚಾರವನ್ನು 'ಕರ್ನಾಟಕಕ್ಕೆ ಖಾನನು ಬಂದನು' ಎಂದೇ ಕರೆಯಲಾಗಿದೆ. 'ಬಿಜಾಪುರವನ್ನು ಕೇಂದ್ರವಾಗಿರಿಸಿ ಕೊಂಡು ಮಹಮದೀಯರು, ಇಕ್ಕೇರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕೆಳದಿಯ ಅರಸರು, ಶ್ರೀರಂಗಪಟ್ಟಣವನ್ನು ಕೇಂದ್ರವಾಗಿರಿಸಿಕೊಂಡು ಮೈಸೂರು ಅರಸರು ರಾಜ್ಯವಾಳುತ್ತಿದ್ದ ಸಂದರ್ಭದಲ್ಲಿ ರಣದುಲ್ಲಾಖಾನ್ ಮತ್ತು ಮಲ್ಲಿಕ್ ರಿಹಾನನು ಇಕ್ಕೇರಿಯ ಮೇಲೆ ಕೈಗೊಂಡ ದಂಡಯಾತ್ರೆಯೇ ಮೊದಲನೆಯದೆಂದು ಈ ಕೃತಿ ಹೇಳುವುದು" ಎಂದು ರಾಮೇಗೌಡ ಅವರು ಹೇಳಿದ್ದಾರೆ.

ಚಿಕ್ಕದೇವರಾಜ ವಂಶಾವಳಿಯ ಪ್ರಕಾರ ಮಹಮದ್ ಆದಿಲ್‌ಷಾಹನ ದಂಡನಾಯಕ ರಣದುಲ್ಲಾ ಖಾನನು "೪೦.೦೦೦ ಕುದುರೆಗಳನ್ನು, ೪೦ ಆನೆಗಳನ್ನು, ೧೦ ಸಾವಿರ ಕಾಲಾಳುಗಳನ್ನು ಮರಾಠ ಸರದಾರರನ್ನು ಒಟ್ಟುಗೂಡಿಸಿಕೊಂಡು ದಕ್ಷಿಣ ಕರ್ನಾಟಕದ ಮೇಲೆ ವ್ಯವಸ್ಥಿತ ಆಕ್ರಮಣಗಳನ್ನು ನಡೆಸಿದನು" ಎಂದಿದೆ. 'ಮಹಮದ್‌ನಾಮ' ಮತ್ತು 'ಬಸಾತೀನ ಸಲಾತಿನ್' ಎಂಬ ಎರಡು ಐತಿಹಾಸಿಕ ಕೃತಿಗಳು ಈ ವಿಚಾರವನ್ನು ಪುಷ್ಟೀಕರಿಸುತ್ತವೆ.

ಇಕ್ಕೇರಿಯ ನಂತರ ಮಾಡಿದ ಹಲವು ಆಕ್ರಮಣಗಳಲ್ಲೂ ಮಲ್ಲಿಕ್ ರಿಹಾನ್ ಪ್ರಮುಖ ಪಾತ್ರವಹಿಸಿದ್ದು, ಹೆಚ್ಚಿನ ಗೆಲುವನ್ನು ಪಡೆದನು. ಇಕ್ಕೇರಿಯ ನಂತರ ಸಿರಾ ಆಯಕಟ್ಟಿನ ಸ್ಥಾನದಲ್ಲಿದ್ದು ಅದರ ಆಕ್ರಮಣ ಅಗತ್ಯವಾಗಿತ್ತು. ಈ ಪ್ರದೇಶ ಆದಿಲ್‌ಷಾಹಿಗಳ ಪ್ರಭಾವಕ್ಕೆ ಈ ಹಿಂದೆಯೇ ಒಳಗಾಗಿದ್ದರೂ ಅವರ ಪೂರ್ಣಹಿಡಿತಕ್ಕೊಳಪಟ್ಟಿರಲಿಲ್ಲ.

ನಜೀಬ್‌ಖಾನ್ ಅಹ್ಜಾರಿಯು ಸಿರಾದ ಮೇಲೆ ಸಂಪೂರ್ಣ ಹತೋಟಿಯನ್ನು ಹೊಂದಲು ಅಸಮರ್ಥನಾಗಿದ್ದನು. ಆದ್ದರಿಂದ ರಣದುಲ್ಲಾಖಾನನಿಗೆ ಅದನ್ನು ಪುನಃ ವಶಪಡಿಸಿಕೊಳ್ಳುವಂತೆ ತಿಳಿಸಿದನು. ಬಿಜಾಪುರದ ಮತ್ತೊಬ್ಬ ಪ್ರಸಿದ್ಧ ನಾಯಕ ಅಫ್‌ಜಲ್ ಖಾನನು ಕ್ರಿ.ಶ.೧೬೩೨ರಲ್ಲಿ ಸಿರಾದ ಮೇಲೆ ಆಕ್ರಮಣ ಮಾಡಿ ಅಲ್ಲಿನ ಪಾಳೆಯಗಾರ ಕಸ್ತೂರಿ ರಂಗನ ಸೈನ್ಯವನ್ನು ಎದುರಿಸುವ ಪ್ರಯತ್ನ ಮಾಡಿದನು. ಆದರೆ ಸಿರಾದ ಸಮೀಪ ನಡೆದ ಹೋರಾಟದಲ್ಲಿ ಅಫ್‌ಜಲ್ ಖಾನನು ಮರಣ

ಹೊಂದಿದನು. ಈ ವೇಳೆಗೆ ಸಿರಾವನ್ನು ಸಂಪೂರ್ಣ ಹತೋಟಿಗೆ ತೆಗೆದುಕೊಂಡು ಸಿರಾದ ಸುಬೇದಾರನಾಗಿ ಅಧಿಕಾರಕ್ಕೆ ಬಂದವನೇ ಮಲ್ಲಿಕ್ ರಿಹಾನ್.

## ಸುಬೇದಾರನಾಗಿ ಮಲ್ಲಿಕ್ ರಿಹಾನ್

ಮಲ್ಲಿಕ್ ರಿಹಾನನು ಕ್ರಿ.ಶ.೧೪೮೯ರಲ್ಲಿ ಸ್ಥಾಪನೆಯಾದ ಆದಿಲ್‌ಷಾಹಿ ಮನೆತನದ ಮಹಮದ್ ಆದಿಲ್‌ಷಾಹನ, ಸೇನಾ ದಂಡನಾಯಕ ರಣದುಲ್ಲಾಖಾನನ ಜೊತೆ ಸಹದಂಡನಾಯಕನಾಗಿದ್ದನು. ಈತನು ತನ್ನ ಸ್ವಂತ ಶಕ್ತಿ ಸಾಮರ್ಥ್ಯಗಳಿಂದ ಅಪಾರವಾದ ಸ್ಥಾನಮಾನವನ್ನು ಗಳಿಸಿದನು. ಈ ವೇಳೆಗಾಗಲೇ ಕಾವೇರಿ ನದಿಯ ಉತ್ತರಕ್ಕಿದ್ದ ಭಾಗಗಳು ಬಿಜಾಪುರಕ್ಕೆ ಸೇರಿದ್ದವು. ಇದಾದ ಕೂಡಲೇ ಷಹಜಿಯನ್ನು ಬೆಂಗಳೂರಿಗೆ ರಾಜ್ಯಪಾಲನನ್ನಾಗಿ ನೇಮಿಸಿ ಸಿರಾವನ್ನು ಮಲ್ಲಿಕ್ ರಿಹಾನನ ಸುಬೇದಾರಿಕೆಗೆ ಬಿಟ್ಟುಕೊಟ್ಟು ರಣದುಲ್ಲಾಖಾನನು ಬಿಜಾಪುರಕ್ಕೆ ತೆರಳಿದನು.

ಸಿರಾದ ಕ್ರಿ.ಶ.೧೬೫೧ರ ಪರ್ಶಿಯನ್ ಶಾಸನದ ಪ್ರಕಾರ ಕ್ರಿ.ಶ.೧೬೩೭ರಲ್ಲಿ ಸಿರಾ ಭಾಗವು ಬಿಜಾಪುರ ಸುಲ್ತಾನರ ವಶವಾಯಿತೆಂದೂ, ಕ್ರಿ.ಶ.೧೬೩೭ರಿಂದ ೧೬೫೧ರವರೆಗೆ ಮಲ್ಲಿಕ್ ರಿಹಾನ್ ಎಂಬ ಸುಬೇದಾರನು ಆಳ್ವಿಕೆ ನಡೆಸಿದನೆಂದು[೬] ತಿಳಿದುಬರುತ್ತದೆ.

ಮಲ್ಲಿಕ್ ರಿಹಾನನು ಬಿಜಾಪುರದ ಹಿಡಿತವನ್ನು ಸಿರಾ ಪ್ರದೇಶದಲ್ಲಿ ಭದ್ರಪಡಿಸುವುದರ ಜೊತೆಗೆ ಬಿಜಾಪುರದ ಆಡಳಿತಕ್ಕೆ ಅನುಕೂಲ ಮಾಡಬೇಕೆಂಬ ಜವಾಬ್ದಾರಿಯನ್ನು ಹೊತ್ತಿದ್ದನು. ಸ್ಥಳೀಯ ಸಾಮಂತರಿಂದ ಕಪ್ಪ-ಕಾಣಿಕೆಗಳನ್ನು ಸರಿಯಾಗಿ ವಸೂಲಿ ಮಾಡುವ ಮತ್ತು ಅವಿಧೇಯರನ್ನು ಬಗ್ಗುಬಡಿಯುವ ಹೊಣೆಗಾರಿಕೆಯು ಈತನ ಮೇಲಿದ್ದಿತು.

ಮಲ್ಲಿಕ್ ರಿಹಾನನ ಸುಬೇದಾರಿಕೆಯಲ್ಲಿ ಸಿರಾ ಉತ್ತಮ ಆಡಳಿತ ಹೊಂದಿತ್ತು. ಅಂತಹ ವೇಳೆಯಲ್ಲಿ ಕರ್ನಾಟಕದ ಪಾಳೆಯಗಾರರು ಯಾರೂ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ಆದಿಲ್ ಷಾಹಿ ಆಡಳಿತವನ್ನು ಸ್ವೀಕರಿಸಲು ಸಿದ್ಧರಾಗಿರಲಿಲ್ಲ. ಕೆಲವರು ಅವನ ವಿರುದ್ಧ ಬಹಿರಂಗವಾಗಿಯೇ ದಂಗೆ ಎದ್ದರು. ಮತ್ತೆ ಕೆಲವರು ದಕ್ಷಿಣ ಕರ್ನಾಟಕದ ಆಕ್ರಮಣಗಳಲ್ಲಿ ಅವನ ಜೊತೆಗೂಡಿದ್ದರೂ ಸಹ ಆಂತರಿಕವಾಗಿ ಹಗೆತನವನ್ನು ಹೊಂದಿದ್ದು, ಬಿಜಾಪುರದ ಹಿಡಿತದಿಂದ ತಪ್ಪಿಸಿಕೊಳ್ಳಲು ಅವಕಾಶಕ್ಕಾಗಿ ಸದಾ ಕಾಯುತ್ತಿದ್ದರು. ಇಂಥಹ ವೇಳೆಯಲ್ಲಿ ಮಲ್ಲಿಕ್ ರಿಹಾನನು ಸದಾ ಕಾಲ ದಂಗೆಯೆದ್ದು, ಪಿತೂರಿ ಮಾಡುತ್ತಿದ್ದ ನಾಯಕರು ಮತ್ತು ಪಾಳೆಯಗಾರರನ್ನು ಬಗ್ಗುಬಡಿಯುವಲ್ಲಿ ತನ್ನ ಸಾಹಸವನ್ನು ಮೆರೆದನು. ಈ ಯುದ್ಧಗಳಿಂದಾಗಿ ತುಮಕೂರು, ಚಿಕ್ಕನಾಯಕನಹಳ್ಳಿ, ಶಿವಗಂಗೆ, ಕುಣಿಗಲ್, ಬೆಂಗಳೂರು, ದೊಡ್ಡ ಬಳ್ಳಾಪುರ, ಹೊಸಕೋಟೆ, ಕೋಲಾರ ಮತ್ತು ಚನ್ನಪಟ್ಟಣಗಳನ್ನು ಒಳಗೊಂಡ ವಿಶಾಲ ಪ್ರದೇಶವನ್ನು ಬಿಜಾಪುರಕ್ಕೆ ಸೇರಿಸುವಲ್ಲಿ ಯಶಸ್ವಿಯಾದನು. ರಣದುಲ್ಲಾಖಾನನು ಶ್ರೀರಂಗಪಟ್ಟಣವನ್ನು ಆಕ್ರಮಿಸಿದಾಗ ಈತನೂ ಸಹ ಹೋರಾಡಿದನು. ದಕ್ಷಿಣ ಕರ್ನಾಟಕದ ಎಲ್ಲ ರಾಜರಿಗಿಂತ ಕಂಠೀರವ ನರಸಿಂಹರಾಜ

ಒಡೆಯರು ಹೆಚ್ಚು ಪ್ರಬಲರಾಗಿದ್ದು[೭] 'ಕರ್ನಾಟಕ ಚಕ್ರೇಶ್ವರ'[೮] ಎಂಬ ಬಿರುದನ್ನು ಪಡೆದು ನೆರೆಯ ರಾಜ್ಯಗಳಿಗೆ ಸಿಂಹಸ್ವಪ್ನವಾಗಿದ್ದರು. ಬಿಜಾಪುರ ಸೈನ್ಯದ ಯಾವ ತಂತ್ರಗಳಿಗೂ ಬಗ್ಗದ ಮೈಸೂರು ಸೈನ್ಯ ರಾತ್ರಿ ಆಕ್ರಮಣಗಳನ್ನು ನಡೆಸಿತು. ಇದರಿಂದ ಬಿಜಾಪುರದ ಸೇನಾ ನಾಯಕರು ಚಕಿತರಾಗಿ ಮುಂಜಾಗರೂಕತೆಯಿಂದ ಒಪ್ಪಂದಕ್ಕೆ ಬಂದು ಒಡೆಯರಿಂದ ಸಣ್ಣ ಮೊತ್ತವನ್ನು ಸ್ವೀಕರಿಸಿ ತೃಪ್ತರಾದರು. ಹಯವದನರಾವ್ ಅವರ ಪ್ರಕಾರ "ಮೈಸೂರು ರಾಜನು ಇಪ್ಪತ್ತು ಲಕ್ಷ ರೂ. ಹಣವನ್ನು ನೀಡಬೇಕಾಯಿತು" ಎಂದಿದ್ದಾರೆ. ಅಂದಿನ ಮೈಸೂರು ರಾಜ್ಯದ ವಿಸ್ತಾರವನ್ನಾಗಲಿ, ಅಲ್ಪ ಸಂಪನ್ಮೂಲವನ್ನಾಗಲಿ ಗಮನಿಸಿದಾಗ ಇದು ಕಹಿಯಾಗಿಯೇ ಇತ್ತೆಂದು ಭಾವಿಸಬೇಕಾಗುತ್ತದೆ.

ನಂತರ ರಣದುಲ್ಲಾಖಾನನು ಹಿಂದಿರುಗುತ್ತಿದ್ದಂತೆ ಮೈಸೂರು ರಾಜನು ಒಪ್ಪಂದವನ್ನು ಮುರಿದು ಬಿಜಾಪುರಕ್ಕೆ ಕಪ್ಪವನ್ನು ಕೊಡಲು ನಿರಾಕರಿಸಿದನು. ಕಾವೇರಿಯಿಂದ ಉತ್ತರಕ್ಕಿದ್ದ ನೊಣವಿನಕೆರೆ ಮತ್ತು ತುರುವೇಕೆರೆಯನ್ನು ವಶಪಡಿಸಿಕೊಳ್ಳುವ ಯತ್ನದ ಮೂಲಕ ಸ್ಪಷ್ಟವಾಗಿ ಒಪ್ಪಂದವನ್ನು ಅಲ್ಲಗಳೆದನು. ಇದು ತಮ್ಮ ಪ್ರದೇಶವನ್ನು ವಶಪಡಿಸಿಕೊಂಡಂತೆ ಎಂದು ಭಾವಿಸಿದ ಮಲ್ಲಿಕ್ ರಿಹಾನ್ ಬಿಜಾಪುರ ಸೈನ್ಯದೊಂದಿಗೆ ಕಾಣಿಸಿಕೊಂಡನು. ಈ ಬಾರಿ ಶ್ರೀರಂಗಪಟ್ಟಣವನ್ನು ಪೂರ್ಣವಾಗಿ ವಶಪಡಿಸಿಕೊಳ್ಳಲು ಬಿಜಾಪುರದ ಮತ್ತೊಬ್ಬ ನಾಯಕ ಮುಸ್ತಾಫ್ ಖಾನನೊಂದಿಗೆ ಕ್ರಿ.ಶ.೧೬೪೦ರಲ್ಲಿ ದಂಡಯಾತ್ರೆಯನ್ನು ಕೈಗೊಂಡನು. ಆದರೆ ಎಲ್ಲವೂ ವ್ಯರ್ಥವಾಗಿ ಬಿಜಾಪುರದ ಸೈನ್ಯ ಸಾಕಷ್ಟು ನಷ್ಟವನ್ನು ಅನುಭವಿಸಿತು. ಕಂಠೀರವ ನರಸಿಂಹರಾಜ ಒಡೆಯರು ಇದನ್ನೇ ಬಳಸಿಕೊಂಡು ಮೇ ೧೬೪೨ರಲ್ಲಿ ತುರುವೇಕೆರೆಯನ್ನು ಅಫ್‌ಜಲ್ ಖಾನನಿಂದ ವಶಪಡಿಸಿಕೊಂಡರು. ಇದರಿಂದ ದಕ್ಷಿಣ ಕರ್ನಾಟಕದಲ್ಲಿ ಬಿಜಾಪುರದ ಅಸ್ತಿತ್ವಕ್ಕೆ ಬಲವಾದ ಪೆಟ್ಟು ಬಿದ್ದಂತಾಯಿತು. ಇದರಿಂದ ಮೈಸೂರಿನ ಸೈನ್ಯಕ್ಕಿಂತ ರಾಜಕೀಯವಾಗಿ, ಸೈನಿಕವಾಗಿ ಪ್ರಬಲರೆಂದು ಸಾಬೀತುಪಡಿಸದೆ ಬಿಜಾಪುರ ಸೈನ್ಯಕ್ಕೆ ಅಲ್ಲಿ ಉಳಿಗಾಲವಿಲ್ಲದಂತಾಯಿತು. ಆದ್ದರಿಂದ ಕ್ರಿ.ಶ.೧೬೪೪ರಲ್ಲಿ ಹೊಳೇನರಸೀಪುರದ ಆಡಳಿತಗಾರನಿಗೆ ಮಲ್ಲಿಕ್ ರಿಹಾನನು ಎತ್ತಿಕಟ್ಟಿ ಮೈಸೂರಿಗೆ ಕಪ್ಪಕೊಡದಂತೆ ಕುಮ್ಮಕ್ಕು ನೀಡಿದನು. ಮೈಸೂರು ಸೈನ್ಯ ಬಾಕಿ ವಸೂಲಿಗೆ ಹೋದಾಗ ಮಲ್ಲಿಕ್ ರಿಹಾನನು ಇತರ ಬಿಜಾಪುರ ಸೈನ್ಯದೊಂದಿಗೆ ಹೊಳೇನರಸೀಪುರದ ರಕ್ಷಣೆಗೆ ಹೋದನು. ಹಾಗೆಯೇ ಪಿರಿಯಾಪಟ್ಟಣದ ಪಾಳೆಯಗಾರನ ಬೆಂಬಲಕ್ಕೂ ೮,೦೦೦ ಕುದುರೆ, ೧೫,೦೦೦ ಕಾಲಾಳುಗಳೊಂದಿಗೆ ಹೋಗಿ ಕಂಠೀರವ ನರಸಿಂಹರಾಜ ಒಡೆಯರನ್ನು ಎದುರಿಸಿದನು. ಆದರೆ ಪಶ್ಚಿಮದ ಪಿರಿಯಾಪಟ್ಟಣದಲ್ಲಿ ನಡೆದ ಕಗ್ಗೊಲೆಯ ನಂತರ ಕಂಠೀರವ ಪರಿಯಾಪಟ್ಟಣವನ್ನು ತನ್ನ ವಶಕ್ಕೆ ತೆಗೆದುಕೊಂಡುದು ಇನ್ನೊಂದು ಸಾಧನೆ. ಗೋವಿಂದ ವೈದ್ಯ ಪಿರಿಯಾಪಟ್ಟಣದ ದೊರೆಯನ್ನು ನಂಜುಂಡರಾಜ ಎಂದಿರುವುದರಿಂದ ಇಲ್ಲಿಯ ಮಲ್ಲಿಯರಾಜ ಅವನ ಮಗನೋ ಅಥವಾ ಸೋದರನೋ ಆಗಿರಬಹುದು ಎಂದಿದ್ದಾನೆ.[೯] ಹೀಗೆ ದಕ್ಷಿಣ ಕರ್ನಾಟಕದ ಪಾಳೆಯಗಾರರನ್ನು ಎತ್ತಿಕಟ್ಟುವ ಕುತಂತ್ರದಿಂದ ರಿಹಾನನಿಗೆ ಯಾವ ಲಾಭವೂ ದೊರೆಯಲಿಲ್ಲ. ಈ ಎಲ್ಲಾ ಹೋರಾಟಗಳಲ್ಲಿ ಮೈಸೂರಿನ ರಾಜನಿಗೆ ಜಯ ಲಭಿಸಿತು.

ಹಾಗೆಯೇ ಬಿಜಾಪುರ ಸೈನ್ಯದ ಗೌರವವೂ ಮಣ್ಣು ಪಾಲಾಯಿತು. ನಂತರ ಮಹಮದ್ ಆದಿಲ್‌ಷಾಹನು ಶ್ರೀರಂಗಪಟ್ಟಣವನ್ನು ದುರ್ಬಲಗೊಳಿಸಿ ನೊಣವಿನಕೆರೆ ಮತ್ತು ತುರುವೇಕೆರೆಗಳನ್ನು ವಶಪಡಿಸಿಕೊಳ್ಳಲು ಆದೇಶಿಸಿ ಮುಸ್ತಾಫ್ ಖಾನನನ್ನು ಕಳುಹಿಸಿದನು. ಮುಸ್ತಾಫ್ ಖಾನನು ತುರುಗೆರೆಗೆ ಅರೆಗಾವುದದೆ ಬೀಡು ಬಿಟ್ಟನು. "ಅವನ ಬೀಡಿನಲ್ಲಿ ಗುಡಿಗುಂಡಾರ, ನೀರಿನ ಅರವಟಿಗೆ ಇವು ಪ್ರತಿಯೊಬ್ಬನಿಗೂ ಇದ್ದವು. ಕರಿಗಳ ಶಾಲೆ ಇದ್ದಿತು. ತುರುಗಗಳ ಲಾಯವಿದ್ದತು. ಬಹುವಸ್ತು ಶೋಭಿಪ ಅಂಗಡಿಗೇರಿ ಇದ್ದಿತು. ಭಂಗಿಯ ಹೇರು, ಅಪಿನಿಯ ಮೊಟ್ಟೆ, ಸಾರಾಯದ ಅಂಗಡಿ, ಸುರೆಯ ಕತ್ತಿಗಳ ಜಂಗುಳಿ ಇವುಗಳ ಸಾಲಪಸರವು ಇದ್ದಿತು. ಡೋಳಿನ ಕುದುರೆಗಳೂ, ಡಮಾನದ ಮದಕರಿಗಳು (ದೊಡ್ಡ ನಗಾರಿಗಳು) ಟುಮಕಗಳ ಒಂಟೆಗಳು, ಪಾಳೆಯದ ಅಂಗ ರಕ್ಷಣೆಯ ರಾವುತರೂ ಕೂಡ ಸಪ್ಪಳ ಮಾಡುತ್ತ ತಿರುಗುತ್ತಿದ್ದರು. ದಂಡಿನ ಎಚ್ಚರಿಕೆಯ ಕಾವಲಿಗೆಂದು, ಹೊಸ ಮನುಷ್ಯರ ಗವಲಿಗೆ(ವಾಸನೆಗೆ) ಗಳಿಕ್ಕಿತು. ಮುಸುಕಿ ಮುಂಬರುವ ನಾಯಿಗಳೂ ಶೋಭಿಸುತ್ತಿದ್ದವು"[೧೦] ಎಂದು ತುರುವೇಕೆರೆಯ ಅಂದಿನ ಸ್ಥಿತಿಯ ಬಗ್ಗೆ ವರ್ಣನೆ ನೀಡಿದ್ದಾನೆ. ಕಂಠೀರವ ನರಸಿಂಹರಾಜ ಒಡೆಯನು ತನ್ನ ಸೈನ್ಯವನ್ನು ಒಗ್ಗೂಡಿಸಿ ಸ್ವತಃ ಯುದ್ಧಕ್ಕೆ ಎಲ್ಲ ಸಿದ್ಧತೆಗಳನ್ನು ನಡೆಸಿ ಬಿಜಾಪುರ ಸೈನ್ಯವನ್ನು ಎದುರಿಸಿದನು. ಆದ್ದರಿಂದ ಮುಸ್ತಾಫ್ ಖಾನನಿಗೆ ವಹಿಸಿದ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗಲಿಲ್ಲ.

ಈ ಘಟನೆ ಸಂಭವಿಸಿದಾಗ ಮೈಸೂರಿನಲ್ಲಿಯೇ ಇದ್ದ ಇಟಲಿಯ ಪ್ರವಾಸಿ ಲಿಯೋನಾರ್ಡೊ ಸಿನ್ನಾಮಿಯವರು ಈ ರೀತಿ ಹೇಳುತ್ತಾರೆ.

> "ಕಂಠೀರವನು ದುರ್ಬಲರ ಮೇಲೆ ಯುದ್ಧ ಮಾಡಿದುದಲ್ಲದೇ ಅತೀ ಬಲಿಷ್ಠರಾದ ಮೂರ್ ಜನಾಂಗದ ಮೇಲೂ ಯುದ್ಧ ಮಾಡಿದನು. ಐದಾಲ್ ಖಾನನ ಬಂಧುವೂ ಹಾಗೂ ಸೇನಾಧಿಪತಿಯೂ ಆದ ಮುಸ್ತಾಫ್ ಖಾನನು ೬೦,೦೦೦ ಸೈನ್ಯದೊಡಗೂಡಿ ಮೈಸೂರಿನ ಮೇಲೆ ನುಗ್ಗಿದನು. ಆದರೆ ಅವನು ಯಾವ ದೇಶದಿಂದ ಬಂದಿದ್ದನೋ ಅಲ್ಲಿಗೆ ಬಲಾತ್ಕಾರವಾಗಿ ಮತ್ತೇ ಹಿಂದಿರುಗಬೇಕಾಯಿತು"[೧೧]

-ಎಂದಿದ್ದಾನೆ. ಈ ವೇಳೆಗೆ ಬಿಜಾಪುರದ ಸೈನ್ಯ ತನ್ನ ಮರ್ಯಾದೆ ಕಾಯ್ದುಕೊಳ್ಳಲು ಪೂರ್ವದ ಕಡೆ ತಿರುಗಿ ಪೆನುಗೊಂಡದ ಶ್ರೀರಂಗ, ಮಧುರೆಯ ನಾಯಕ, ತಂಜಾವೂರು ಮತ್ತು ಜಿಂಜಿಗಳ ಮೇಲೆ ಹೋರಾಡಿತು. ಈ ಹೋರಾಟಗಳಲ್ಲಿ ಮಲ್ಲಿಕ್ ರಿಹಾನ್ ತನ್ನ ಶೌರ್ಯವನ್ನು ಮೆರೆದನು. ಆದರೆ ಮೈಸೂರಿನ ವಿರುದ್ಧ ಯುದ್ಧ ವ್ಯರ್ಥವೆಂದು ಸಾಭೀತಾಗಿದ್ದರಿಂದ ಸಂಧಾನ ಮಾರ್ಗಗಳನ್ನು ಹಿಡಿಯಲು ನಿರ್ಧರಿಸಲಾಯಿತು.

ಮಲ್ಲಿಕ್ ರಿಹಾನನು ತಿರುಪತ್ತೂರು ಕೋಟೆ, ಕಾವೇರಿಪಟ್ಟಣಂ, ರಾಯದುರ್ಗ, ಕನಕಗಿರಿ, ರತ್ನಗಿರಿ, ಅರ್ಜುನಕೋಟೆ, ದಾಲಿನ ಕೋಟೆಗಳ ಆಕ್ರಮಣದಲ್ಲಿ ಪ್ರಮುಖ ಪಾತ್ರವಹಿಸಿದನು. ಇಂತಹ

ಸಂದರ್ಭದಲ್ಲಿ ಶಿವಾಜಿಯ ಆಕ್ರಮಣ ಷಹಜಿಯ ಬಂಧನಕ್ಕೆ ಕಾರಣವಾಯಿತಲ್ಲದೆ, ಶಿವಾಜಿಯ ವಿಧ್ವಂಸಕ ಕೃತ್ಯಗಳಿಗಾಗಿ ಸುಲ್ತಾನನು ಬಹಳ ಕೋಪಗೊಂಡನು. ಈ ವೇಳೆಗೆ ಶಿವಾಜಿಯು ಮಾವಳಿಗಳ ಸೈನ್ಯವನ್ನು ವ್ಯವಸ್ಥೆಗೊಳಿಸಿಕೊಂಡನು. ನಂತರ ಕೋಟೆಕೊತ್ತಲಗಳನ್ನು ದುರಸ್ತಿಗೊಳಿಸಿ, ಮದ್ದು ಗುಂಡುಗಳನ್ನು ಸಂಗ್ರಹಿಸಿ, ಕ್ರಿ.ಶ.೧೬೪೪ರಲ್ಲಿ ಸಿಂಹಘಡವನ್ನು ಹಿಡಿದುಕೊಂಡು, ಬಿಜಾಪುರದ ವಿರುದ್ಧ ತನ್ನ ಆಕ್ರಮಣ ನೀತಿಯನ್ನು ಪ್ರಾರಂಭಿಸಿದನು. ಜಗದೇವರಾಯನ ಪ್ರದೇಶಗಳು, ಬಿದನೂರು ಬೆಂಗಳೂರಿನಂತಹ ದೂರದಲ್ಲಿರುವ ಪ್ರದೇಶಗಳಿಗಿಂತ ತನ್ನ ಸ್ವಂತ ರಾಜ್ಯದ ಶಾಂತಿ ಭದ್ರತೆಗಳಿಗಾಗಿ ಸುಲ್ತಾನನು ಹೆಚ್ಚು ಗಮನ ಕೊಟ್ಟಿದ್ದನು. ಸರಿಯಾದ ಕ್ರಮವನ್ನು ಅನುಸರಿಸದಿದ್ದರೆ ಶಿವಾಜಿಯನ್ನು ತಡೆಗಟ್ಟುವುದು ಅಸಾಧ್ಯವೆಂದು ತಿಳಿದು, ಮಗನ ಪ್ರಾಬಲ್ಯವನ್ನು ಕಡಿಮೆ ಮಾಡಬಹುದೆಂಬ ಉದ್ದೇಶದಿಂದಲೇ ಕ್ರಿ.ಶ.೧೬೪೮ನೇ ಜುಲೈ ೨೫ ರಂದು ಮುಸ್ತಫ್‌ಖಾನನು ಷಹಜಿಯನ್ನು ಬಂಧಿಸಿದನು. ಸುಲ್ತಾನನ ಆಜ್ಞೆಯಂತೆ ಷಹಜಿಯನ್ನು ಬಿಜಾಪುರಕ್ಕೆ ಕರೆದುಕೊಂಡು ಹೋಗುವಾಗ ೧೬೪೮ನೇ ನವೆಂಬರ್ ೯ರಂದು ಮುಸ್ತಫ್‌ಖಾನನು ಮರಣ ಹೊಂದಿದನು. ನಂತರ ಬಿಜಾಪುರ ಸೇನಾನಾಯಕತ್ವವನ್ನು ಖಾನ್ ಮಹಮದ್‌ನಿಗೆ ವಹಿಸಿಕೊಡಲಾಯಿತು. ೧೬೪೮ನೇ ಡಿಸೆಂಬರ್ ೨೮ ರಂದು ಖಾನ್ ಮಹಮದ್‌ನು ಜಿಂಜಿ ಕೋಟೆಯನ್ನು ವಶಪಡಿಸಿಕೊಂಡನು.

"ಷಹಜಿಯು ರಾಚೇವಾರದ ಹಾಗೂ ಜಿಂಜಿ ಮರಾಠರ ಜೊತೆಯಲ್ಲಿ ನಿಕಟ ಸಂಬಂಧವನ್ನಿಟ್ಟು ಕೊಂಡಿರುವನೆಂದೂ, ಅವರಿಗೆ ಎಲ್ಲ ಸಾಮಗ್ರಿಗಳನ್ನು ಒದಗಿಸುತ್ತಿರುವನೆಂದೂ, ಆದಿಲ್‌ಷಾಹಿಯ ಆಸ್ಥಾನದಲ್ಲಿ ಷಹಜಿಯ ವಿರುದ್ಧವಾದ ಹೇಳಿಕೆಗಳು ಇದ್ದುದರಿಂದ ಷಹಜಿಯನ್ನು ಬಂಧಿಸಲಾಯಿತು; ವಿಲ್ಕ್ಸ್ ಅವರ ಪ್ರಕಾರ "ಷಹಜಿಯ ವಿದ್ರೋಹಕ ಚಟುವಟಿಕೆಗಳೇ ಅವನ ದಸ್ತಗಿರಿಗೆ ಕಾರಣಗಳಾದವು".

ನಂತರ ಖಾನ್ ಮಹಮದ್‌ನು ಪೆನುಗೊಂಡೆ ಕೋಟೆಯನ್ನು ವಶಪಡಿಸಿಕೊಂಡು ಬಿಜಾಪುರಕ್ಕೆ ಹಿಂದಿರುಗಬೇಕೆಂದು ಯೋಚಿಸಿದ್ದನು. ಆದರೆ ಸುಲ್ತಾನನ ನಿಯೋಗಿಯಾದ ನೂರುಲ್ಲಾ ಎಂಬುವನು ಪೆನುಗೊಂಡೆ ಕೋಟೆಯನ್ನು ಹಿಡಿದುಕೊಂಡು ಜಗದೇವರಾಯನ ರಾಜ್ಯದ ಮೇಲೆ ಹೋಗಬೇಕೆಂದು ಹೇಳಿದ್ದರಿಂದ ಖಾನ್ ಮಹಮದ್‌ನು ತನ್ನ ಕಾರ್ಯಕ್ರಮದಲ್ಲಿ ಬದಲಾವಣೆ ಮಾಡಿಕೊಂಡನು.[೨೨] ಮಲ್ಲಿಕ್ ರಿಹಾನನು ಆದಿಲ್‌ಷಾಹನ ದಕ್ಷಿಣ ಕರ್ನಾಟಕದ ಆಕ್ರಮಣದಲ್ಲಿ ಅಷ್ಟೆಲ್ಲಾ ಸೇವೆಯನ್ನು ಸಲ್ಲಿಸಿ, ಜೀವನದ ಕಡೆಯಲ್ಲಿ ಬಿಜಾಪುರದ ಸುಲ್ತಾನನ ವಿರುದ್ಧ ದಂಗೆಯೆದ್ದನು. ಇಲ್ಲಿ ಇವನ ದಂಗೆಗೆ ಕಾರಣವೇನೆಂದು ತಿಳಿಯುವುದು ಮಾಹಿತಿಯ ಕೊರತೆಯಿಂದ ಕಠಿಣವಾಗಿದೆ. ಆದರೂ ಕೆಲವು ತಾತ್ಕಾಲಿಕ ಕಾರಣಗಳನ್ನು ಊಹಿಸಬಹುದು.

೧. ಮಲ್ಲಿಕ್ ರಿಹಾನನು ಮೈಸೂರಿನೊಡನೆ ನಡೆಸಿದ ವ್ಯವಹಾರ, ಮೈಸೂರನ್ನು ಬಗ್ಗು ಬಡಿಯುವ ಎಲ್ಲ ಯೋಜನೆಗಳ ವಿಫಲತೆಯನ್ನು ಆದಿಲ್‌ಷಾಹನು ಅನುಮಾನಿಸಿರಬೇಕು.

೨. ಮುಸ್ತಾಫ್ ಖಾನನ ಮರಣಾನಂತರ ಖಾನ್ ಮಹಮದ್‌ನನ್ನು ಆದಿಲ್‌ಷಾಹನು ಸೇನಾಧಿಪತಿಯನ್ನಾಗಿ ನೇಮಿಸಿದಾಗ ತನ್ನನ್ನೇ ಏಕೆ ನೇಮಕ ಮಾಡಬಾರದಿತ್ತೆಂದು ಮಲ್ಲಿಕ್ ರಿಹಾನನಿಗೆ ಬೇಸರವಾಗಿರಬೇಕು.

೩. ಅಂಬರ್ ಕಾಲಾ ಎಂಬ ರಿಹಾನನ ನಂಬಿಕೆಯ ಅಧಿಕಾರಿಯ ಕೊಲೆಯ ಹಿಂದೆ ಮಹಮದ್ ಆದಿಲ್ ಷಾಹನ ಕೈವಾಡವಿರಬೇಕೆಂಬ ಅನುಮಾನ ಅಸಮಾಧಾನ ಮಲ್ಲಿಕ್ ರಿಹಾನನಲ್ಲಿ ತುಂಬಿಕೊಂಡಿತ್ತು.

ಈ ಮೂರು ಕಾರಣಗಳಲ್ಲದೆ ಕೆಲವು ಆಂತರಿಕ ಬೆಳವಣಿಗೆಗಳಿಂದ ಅಸಮಾಧಾನಗೊಂಡು ರಿಹಾನನು ದಂಗೆಯೆದ್ದಿರಬೇಕು. ಜಿಂಜಿಯ ಆಕ್ರಮಣ ಮುಂದುವರಿದಿದ್ದಾಗಲೇ ಈತನು ಸಿರಾಗೆ ಹಿಂದಿರುಗಬೇಕಾಯಿತು. ಇದೇ ಸಂದರ್ಭದಲ್ಲಿ ಅಂಬರ್ ಕಾಲಾ ತನ್ನ ಒಡೆಯನೊಡೆನೆ ಹಿಂತಿರುಗಲು ಅನುಮತಿಯನ್ನು ಕೇಳಲು ಹೋದಾಗ ಕೊಲೆಗೀಡಾದನು. ಇದರಿಂದಾಗಿ ಮಲ್ಲಿಕ್ ರಿಹಾನನು ದಂಗೆಯೆದ್ದಾಗ ಅವನ ಗಂಡು ಮಕ್ಕಳು ಮತ್ತು ಅತೃಪ್ತರಾದ ಬಿಜಾಪುರದ ಅಧಿಕಾರಿಗಳು ರಿಹಾನನೊಡನೆ ಸೇರಿಕೊಂಡರು. ಇಂಥ ಸಂದರ್ಭದಲ್ಲಿ ಮಹಮದ್ ಆದಿಲ್‌ಷಾಹನು ಖಾನ್‌ಮಹಮದ್‌ನಿಗೆ ದಂಗೆಯನ್ನು ಅಡಗಿಸಲು ಸೂಚಿಸಿದನು. ಇದರಿಂದಾಗಿ ಮಲ್ಲಿಕ್ ರಿಹಾನನು ಮೈಸೂರು ರಾಜರೊಡನೆ ಸ್ನೇಹ ಬೆಳೆಸಿಕೊಂಡು ಮತ್ತಷ್ಟು ಪ್ರಬಲನಾದನು. ಕೊನೆಗೂ ಬಿಜಾಪುರದ ಸುಲ್ತಾನನಿಗೆ ಶರಣಾಗದೆ ಕ್ರಿ.ಶ.೧೬೫೧ರಲ್ಲಿ ಮರಣ ಹೊಂದಿದನು. ಸಿರಾದಲ್ಲಿ ಈತನನ್ನು ಹೂಳಿ, ಅಲ್ಲಿ ಕಲ್ಲಿನ ಸಮಾಧಿಯನ್ನು ಕಟ್ಟಿಸಲಾಯಿತು.

ಒಟ್ಟಾರೆ ಬಿಜಾಪುರದ ನಾಯಕರು ದಕ್ಷಿಣ ಕರ್ನಾಟಕದ ಕೆಲವು ಪ್ರದೇಶಗಳನ್ನು ವಶಪಡಿಸಿಕೊಳ್ಳುವಲ್ಲಿ ಸಫಲರಾದರು. ಕರ್ನಾಟಕ-ಬಿಜಾಪುರ-ಬಾಲ್ಘಾಟ್ ಪ್ರದೇಶವು ಕೆಳದಿ, ಬಸವಾಪಟ್ಟಣ, ಸಿರಾ, ತುಮಕೂರು, ಬೆಂಗಳೂರು, ಹೊಸಕೋಟೆ, ದೊಡ್ಡಬಳ್ಳಾಪುರ ಮತ್ತು ಕೋಲಾರಗಳನ್ನು ಒಳಗೊಂಡಿದೆ. ಈ ಪ್ರದೇಶಗಳಲ್ಲಿ ಸಿರಾವನ್ನು ಕೇಂದ್ರವಾಗಿರಿಸಿಕೊಂಡು, ಮಲ್ಲಿಕ್ ರಿಹಾನ್ ಆಡಳಿತ ನಡೆಸಿದನು. ಈತನು ಸಹದಂಡನಾಯಕನಾಗಿ, ದಂಡನಾಯಕನಾಗಿ ಸಿರಾದ ಆಡಳಿತ ಮೇಲ್ವಿಚಾರಣೆಯನ್ನು ವಹಿಸಿಕೊಂಡಿದ್ದನು. ಮಲ್ಲಿಕ್ ರಿಹಾನನ ಸುಬೇದಾರಿಕೆಯಲ್ಲಿ ಸಿರಾ ಪ್ರದೇಶವು ಅಭಿವೃದ್ಧಿ ಹೊಂದಿತೆಂದು ಹೇಳಬಹುದು. ಕ್ರಿ.ಶ.೧೬೫೭ರವರೆಗೆ ಮಲ್ಲಿಕ್ ರಿಹಾನನ ಮಕ್ಕಳು ಬಿಜಾಪುರದ ಸುಲ್ತಾನನ ಶಕ್ತಿಯನ್ನು ತಡೆಯಲು ಮುಂದಾದರು. ಆದರೆ ಪ್ರಯೋಜನವಾಗದೆ ಮುಂದೆ[೨] ಈ ಎಲ್ಲಾ ಪ್ರದೇಶಕ್ಕೆ ಶಿವಾಜಿಯ ತಂದೆ ಷಹಜಿಯನ್ನು ಜಾಗೀರುದಾರನನ್ನಾಗಿ ಮಹಮದ್ ಆದಿಲ್‌ಷಾಹನು ನೇಮಿಸಿದನು.

## ೩.೨. ಷಹಜಿ ಮತ್ತು ಆದಿಲ್‌ಷಾಹಿಗಳು(ಕ್ರಿ.ಶ.೧೬೫೧-೧೬೬೪)

ಮಹಾರಾಷ್ಟ್ರದ ಭೋಸಲೆ ವಂಶದ ಮಾಲೋಜಿಯ ಮಗನಾದ ಷಹಜಿಯು ಕ್ರಿ.ಶ.೧೫೯೪ರ ಮಾರ್ಚ್ ೧೫ರಂದು ಜನಿಸಿದನು. ರಣದುಲ್ಲಾಖಾನನನ್ನು ಪ್ರಧಾನ ಸೇನಾಪತಿಯನ್ನಾಗಿಯು, ಷಹಜಿಯನ್ನು ಉಪಪ್ರಧಾನ ಸೇನಾನಾಯಕನಾಗಿಯೂ ನೇಮಕ ಮಾಡಿ ಬಿಜಾಪುರ ಸುಲ್ತಾನನು ಕರ್ನಾಟಕ ದಂಡಯಾತ್ರೆಗೆ ಕಳುಹಿಸಿಕೊಟ್ಟನು. ಕ್ರಿ.ಶ.೧೬೩೮ರಲ್ಲಿ ಹೊರಟ ರಣದುಲ್ಲಾಖಾನ್ ಮತ್ತು ಷಹಜಿ ತುಂಗಭದ್ರಾ

ನದಿಯನ್ನು ದಾಟಿದರು. ವೇಗವಾಗಿ ಧಾವಿಸುತ್ತಾ ಬೆಂಗಳೂರಿನ ಮಾರ್ಗದಲ್ಲಿದ್ದ ಸಿರಾಕ್ಕೆ ಅವರು ಮುತ್ತಿಗೆ ಹಾಕಿ ಅದರ ಒಡೆಯನಾಗಿದ್ದ ಕಸ್ತೂರಿ ರಂಗನನ್ನು ಕೊಂದು, ಸಿರಾ ಪಟ್ಟಣವನ್ನು ವಶಪಡಿಸಿಕೊಂಡರು ಅಲ್ಲಿಂದ ಅವರು ತುಮಕೂರಿಗೆ ಮುತ್ತಿಗೆ ಹಾಕಿ, ಆ ಪಟ್ಟಣವನ್ನು ಲೂಟಿ ಮಾಡಿದರು.[೧೪] ತುಮಕೂರು ಮೇಲಿನ ಆಕ್ರಮಣವನ್ನು ಕುರಿತು;

ಖಾನನ ದಾಳಿಗೆ ಕಂಗೆಟ್ಟು ತುಮಕೂರು
ಭೂ ನಾಥನ್ನೈ ತಂದು ಕಂಡು
ಏನೆಂಬೆ ಸಕಲ ರಾಜ್ಯವ ಬಿಟ್ಟು ಗಿರಿದುರ್ಗ
ಕಾನಲಾರದೆ ತೆರಳಿದನು[೧೫]

-ಎಂದು 'ಕಂಠೀರವ ನರಸರಾಜ ವಿಜಯ'ದಲ್ಲಿ ಉಲ್ಲೇಖಿಸಲಾಗಿದೆ.

ಈ ವಿಜಯದಿಂದ ಮದೋನ್ಮತ್ತರಾದ ಅವರು ಮುಂದುವರಿದು ಬೆಂಗಳೂರಿಗೆ ವಾಯುವ್ಯ ದಿಕ್ಕಿನಲ್ಲಿರುವ ಶಿವಗಂಗೆಯಲ್ಲಿ ಬೀಡುಬಿಟ್ಟರು. ನಂತರ ಕೆಂಪೇಗೌಡನು ಬಿಜಾಪುರ ಸೈನ್ಯದ ಮೇಲೆ ಬಿದ್ದು ಸತತ ಮೂರು ದಿನಗಳವರೆವಿಗೂ ಯುದ್ಧವನ್ನು ಮುಂದುವರಿಸಿದರೂ ಕೂಡಾ ಕೊನೆಗೆ ಸೋತು ರಣಭೂಮಿಯಿಂದ ಹೊರಡಬೇಕಾಯಿತು. ಈತನು ಬೆಂಗಳೂರು ಕೋಟೆಯೊಳಗೆ ಸೇರಿಕೊಂಡು ಅಲ್ಲಿಂದಲೇ ಶತ್ರುಗಳನ್ನು ಪ್ರತಿಭಟಿಸಿದರು ಪ್ರಯೋಜನವಾಗದೇ ಬೆಂಗಳೂರು ಖಾನನ ವಶವಾಯಿತು.

ಬಿಜಾಪುರದ ಸೇನಾಧಿಪತಿಯಾದ ರಣದುಲ್ಲಾಖಾನನ ಅಬ್ಬರಕ್ಕೆ ಅಂಜಿ ಜನರು ಅಡವಿಗಳನ್ನು ಸೇರಿದರು. ಅಂದು ಎಲ್ಲೆಲ್ಲಿಯೂ ಜನರ ಮನದಲ್ಲಿ ಹುಟ್ಟಿದ ಹಾಹಾಕಾರ ಹೇಗಿತ್ತೆಂಬುದನ್ನು ಈ ಪದ್ಯದಲ್ಲಿ ಕಾಣಬಹುದು.

ಕಣ್ಣಿನೊಳಗೆ ಖಾನ ಕನಸಿನೊಳಗೆ ಖಾನ |
ಬಣ್ಣಿಸೆ ಮನದೊಳು ಖಾನ |
ತಿಣ್ಣವೆಡೆದ ಖಾನನ ಸುದ್ದಿ ಜಪವಾಗಿ
ಬಣ್ಣಗೆಟ್ಟುದು ಲೋಕವೆಲ್ಲ|[೧೬]

-ಎಂದು 'ಕಂಠೀರವ ನರಸರಾಜ ವಿಜಯ'ದಲ್ಲಿ ಉಲ್ಲೇಖಿಸಲಾಗಿದೆ.

ಷಹಜಿ ಒಬ್ಬ ದೊಡ್ಡ ಸೇನಾಧಿಪತಿಯಲ್ಲದೆ ಉತ್ತಮ ಆಡಳಿತಗಾರನಾಗಿದ್ದು, ೧೬೩೮ರಲ್ಲಿ ಕರ್ನಾಟಕದ ಮೇಲೆ ದಂಡಯಾತ್ರೆ ಮಾಡಿದನು. ಬಿಜಾಪುರದ ಮುಖ್ಯ ಸೇನಾಪತಿ ರಣದುಲ್ಲಾಖಾನನೊಂದಿಗೆ ಷಹಜಿ ಉಪಸೇನಾಪತಿಯಾಗಿದ್ದನು. ಬೆಂಗಳೂರನ್ನು ಸಾಧಿಸಿದ ಮೇಲೆ ಅದರ ಮೇಲ್ವಿಚಾರಣೆಗಾಗಿ ಷಹಜಿಯನ್ನೇ ನೇಮಿಸಲಾಯಿತು. ನಂತರ ವಶಪಡಿಸಿಕೊಂಡ ಕರ್ನಾಟಕದ ಪ್ರದೇಶಗಳೆಲ್ಲವನ್ನು ಈತನ ಅಧಿಕಾರಕ್ಕೆ ಒಳಪಡಿಸಲಾಗಿತ್ತು. ಕ್ರಿ.ಶ.೧೬೬೦ರ ವೇಳೆಗೆ ಅವನು ಕರ್ನಾಟಕ-ಬಿಜಾಪುರ-ಬಾಲ್ಘಾಟ್ ಅಲ್ಲದೆ ಕರ್ನಾಟಕ-ಬಿಜಾಪುರ-ಪಾಯಂಘಾಟಿಗೂ ಆಡಳಿತಗಾರನಾಗಿದ್ದನು. ಬಿಜಾಪುರದ ಸುಲ್ತಾನನ

ಹೆಸರಿನಲ್ಲಿ ಕರ್ನಾಟಕ ಪ್ರದೇಶಗಳನ್ನು ಗೆದ್ದ ಅವನು ನಿಧಾನವಾಗಿಯಾದರೂ ಒಂದು ದೊಡ್ಡ ಸರ್ಕಾರವನ್ನೇ ಸ್ಥಾಪಿಸುವುದಕ್ಕಾಗಿ ಅಹೋರಾತ್ರಿ ದುಡಿದನು. ಬಿಜಾಪುರ ಸುಲ್ತಾನನು ಕರ್ನಾಟಕದ ಪ್ರದೇಶಗಳ ಮೇಲೆ ಮಿತವಾದ ಹಿಡಿತ ನಡೆಸುತ್ತಿದ್ದುದರಿಂದ ಬೆಂಗಳೂರಿನಲ್ಲಿ ಷಹಜಿ ಭವ್ಯವಾದ ಮರಾಠ ರಾಜಭವನವನ್ನು ನಿರ್ಮಿಸಿದನು.

ಕ್ರಿ.ಶ.೧೬೩೮ರಲ್ಲಿ ಮೊಗಲರಿಗೂ ಮತ್ತು ಬಿಜಾಪುರ ಸುಲ್ತಾನನಿಗೂ ನಡೆದ ಕರಾರಿನ ಪ್ರಕಾರ ಉತ್ತರ ದಿಕ್ಕಿಗಿಂತ ದಕ್ಷಿಣ ದಿಕ್ಕಿಗೆ ಬಿಜಾಪುರವನ್ನು ವಿಸ್ತರಿಸುವುದು ಲಾಭದಾಯಕವಾಗಿಯೂ, ಶಕ್ಯವಾಗಿಯೂ, ಇರಬಲ್ಲುದು ಎಂಬುದನ್ನು ಸುಲ್ತಾನನು ಮನಗಂಡನು. ಹೀಗಾಗಿ ತನ್ನ ಉಪಯೋಗಕ್ಕೆ ಮೈಸೂರು ಅಚ್ಚುಮೆಚ್ಚಿನ ಪ್ರದೇಶವಾಯಿತು.

ಷಹಜಿಯೊಡಗೂಡಿ ರಣದುಲ್ಲಾಖಾನನು ಕ್ರಿ.ಶ.೧೬೩೯ರ ಜನವರಿಯಲ್ಲಿ ಶ್ರೀರಂಗಪಟ್ಟಣದ ಹತ್ತಿರಕ್ಕೆ ಬೀಡುಬಿಟ್ಟನು. ಬಿಜಾಪುರ ಸರ್ಕಾರಕ್ಕೆ ಕೊಡಬೇಕಾಗಿದ್ದ ಕಪ್ಪಕಾಣಿಕೆಯನ್ನು ತಕ್ಷಣ ಕೊಡುವಂತೆ ತಿಳಿಸಲು ರಣದುಲ್ಲಾಖಾನನು ಕಂಠೀರವ ನರಸಿಂಹರಾಜರ ಆಸ್ಥಾನಕ್ಕೆ ವಕೀಲನನ್ನು ಕಳುಹಿಸಿದನು. ಈ ವೇಳೆಗೆ ಮೈಸೂರಿನ ಸೇನಾಧಿಪತಿಯಾಗಿದ್ದ ನಂಜರಾಜಯ್ಯನು ಇವರಿಗೆ ತಲೆಬಾಗದೆ ರಾತ್ರಿ ಆಕ್ರಮಣಗಳನ್ನು ಮಾಡಿ ಅರಕೆರೆ, ಹೊಸಹೊಳಲು ಮತ್ತು ಯಾದಗಿರಿಗಳಲ್ಲಿದ್ದ ಶತ್ರುಠಾಣ್ಯವನ್ನು ನಾಶಪಡಿಸಿದನು. ಇದರಿಂದ ಅಫ್‌ಜಲ್ ಖಾನ್, ಮುಸ್ತಾಫ್ ಖಾನ್, ಇಕ್ಲಾಸ್ ಖಾನ್ ಮತ್ತು ಷಹಜಿಯೊಂದಿಗೆ ಇದ್ದ ಬಿಜಾಪುರ ಸೈನ್ಯವು ಸೋತು ಹೋಯಿತು. ಇದರ ಪರಿಣಾಮವಾಗಿ ಕ್ರಿ.ಶ.೧೬೩೯ ಜನವರಿ ೨೧ ರಂದು ಕಂಠೀರವನಿಗೂ ರಣದುಲ್ಲಾಖಾನನಿಗೂ ಒಪ್ಪಂದವೇರ್ಪಟ್ಟಿತು. ಈ ಒಪ್ಪಂದದ ಮುಖ್ಯಾಂಶಗಳೆಂದರೆ;

೧. ಕಾವೇರಿ ನದಿಯ ದಕ್ಷಿಣಕ್ಕಿರುವ ಪ್ರದೇಶಗಳು ಕಂಠೀರವನಿಗೆ ಸೇರತಕ್ಕವು.

೨. ಕಾವೇರಿ ನದಿಯ ಉತ್ತರ ಭಾಗಕ್ಕಿರುವ ಪ್ರದೇಶಗಳು ಬಿಜಾಪುರ ಸುಲ್ತಾನನಿಗೆ ಸೇರತಕ್ಕವು.

೩. ಈ ಪ್ರದೇಶಗಳಲ್ಲಿ ಕಂದಾಯನ್ನು ವಸೂಲಿ ಮಾಡುವ ಹಕ್ಕು ಕಂಠೀರವನಿಗೆ ಸೇರತಕ್ಕದಾಗಿದ್ದು, ಈ ಪ್ರದೇಶಗಳ ಹುಟ್ಟುವಳಿಯಲ್ಲಿ ಆಡಳಿತಕ್ಕೆ ಬೇಕಾದ ಖರ್ಚನ್ನು ಹಿಡಿದುಕೊಂಡು ಉಳಿದುದನ್ನು ಕಂಠೀರವನು ಬಿಜಾಪುರದ ಕೋಶಕ್ಕೆ ಸೇರಿಸತಕ್ಕದ್ದು ಎಂಬ ಒಪ್ಪಂದದೊಂದಿಗೆ ಯುದ್ಧ ಕೊನೆಗೊಂಡಿತು.

-ಎಂದು ಬಿ.ಮುದ್ದಾಚಾರಿ ಅವರು 'ಮೈಸೂರು ಮರಾಠರ ಬಾಂಧವ್ಯ' ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.

ಈ ದಂಡಯಾತ್ರೆಯ ಪರಿಣಾಮವೆಂದರೆ ಪ್ರಮುಖ ಸ್ಥಳಗಳಾದ ದೊಡ್ಡಬಳ್ಳಾಪುರ, ತುಮಕೂರು, ಕುಣಿಗಲ್, ಚಿಕ್ಕನಾಯಕನಹಳ್ಳಿ ಮತ್ತು ರಾಯದುರ್ಗ ಮೊದಲಾದವು ಷಹಜಿಯ ಆಡಳಿತಕ್ಕೆ ಒಳಪಟ್ಟವು. ಈ ಪ್ರಾಂತ್ಯಗಳ ಸೇರುವಿಕೆಯಿಂದ ಷಹಜಿಗೆ ಅಧಿಕಾರದ ಜೊತೆಗೆ ಭೂದಾಹವು ಹೆಚ್ಚಾಯಿತು. ಮುಸ್ತಾಫ್ ಖಾನನು ಶ್ರೀರಂಗನನ್ನು ಸೋಲಿಸಿ ವೆಲ್ಲೂರನ್ನು ವಶಪಡಿಸಿಕೊಂಡು ಅವನಿಂದ ಸಾಕಷ್ಟು ಯುದ್ಧ ಪರಿಹಾರವನ್ನು ಪಡೆದನು. ಆ ಕೂಡಲೇ ವಾಪಸ್ಸು ಬಿಜಾಪುರಕ್ಕೆ ಬರಬೇಕೆಂಬ ವರ್ತಮಾನವು

ಸುಲ್ತಾನನಿಂದ ಬರಲಾಗಿ ಮುಸ್ತಾಫ್‌ನು ಶ್ರೀರಂಗರಾಯನ ರಾಜ್ಯದಲ್ಲಿ ಗೆದ್ದ ಪ್ರದೇಶಗಳನ್ನು ಅಸಾದ್ ಖಾನ್ ಮತ್ತು ಷಹಜಿಯವರಿಗೆ ಬಿಟ್ಟು ಸ್ವದೇಶಕ್ಕೆ ಮರಳಿದನು. ಮೈಸೂರಿನ ಉತ್ತರಕ್ಕೆ ಮತ್ತು ನೈರುತ್ಯ ಭಾಗಕ್ಕೆ ಇರುವ ಬೆಂಗಳೂರು, ಹೊಸಕೋಟೆ, ಕೋಲಾರ, ದೊಡ್ಡಬಳ್ಳಾಪುರ ಮತ್ತು ಸಿರಾವನ್ನೊಳಗೊಂಡ ಬಿಜಾಪುರ ಪ್ರದೇಶಕ್ಕೆ ಕರ್ನಾಟಕ-ಬಿಜಾಪುರ-ಬಾಲ್ಘಾಟ್ ಎಂಬುದಾಗಿ ಹೆಸರಾಯಿತು. ಇದಕ್ಕೆಲ್ಲಾ ಷಹಜಿ ಆಡಳಿತಾಧಿಕಾರಿಯಾದನು.[೧೬]

ಮುಪ್ಪಿನ ದೇವರಾಜ ಒಡೆಯರ ಮಗ ದೊಡ್ಡ ದೇವರಾಜ ಒಡೆಯರು ಕ್ರಿ.ಶ.೧೬೫೯ರಿಂದ ೧೬೭೩ರವರೆಗೆ ಅಧಿಕಾರದಲ್ಲಿದ್ದರು. ಇವರಿಗೆ ಮರಾಠರ ಜೊತೆ ಉತ್ತಮ ಸಂಬಂಧ ಬೆಳೆಸಿಕೊಳ್ಳುವ ಅವಕಾಶ ದೊರೆಕಿತು. ಆದರೆ ಬಿಜಾಪುರದ ಸೈನ್ಯಾಧಿಕಾರಿಗಳಾದ ಬಹಲೂಲ್ ಖಾನ್ ಹಾಗೂ ಷಹಜಿ ಇವರಿಬ್ಬರೂ ಮೈಸೂರು ರಾಜನಿಗೆ ಮೋಸ ಮಾಡಿ ಉಭಯ ಪಕ್ಷದ ಮಧುರ ಬಾಂಧವ್ಯಕ್ಕೆ ಹುಳಿ ಹಿಂಡಿದರು. ದೊಡ್ಡ ದೇವರಾಜರು ಸಿಂಹಾಸನರೋಹಣ ಮಾಡುವ ವೇಳೆಯಲ್ಲಿ ಬಿಜಾಪುರ ಸರಕಾರಕ್ಕೆ ಕೊಡುವ ಪೊಗದಿಯನ್ನು ಕೊಡಲು ನಿರಾಕರಿಸಿ ತನ್ನ ಯುದ್ಧ ಚಟುವಟಿಕೆಗಳನ್ನು ಮುಂದುವರಿಸಿದರು. ಇದರಿಂದ ಬಿಜಾಪುರ ಸೈನ್ಯ ತಿರುಚನಾಪಳ್ಳಿ(ಮೈಸೂರು) ಕೋಟೆಗೆ ಮುತ್ತಿಗೆ ಹಾಕಿದರೂ ಕೋಟೆಯ ಬಂದೋಬಸ್ತನ್ನು ನೋಡಿ ಷಹಜಿ ಮುಲ್ಲಾಮಹಮದರು ಹಿಂತಿರುಗಿದರು. ಇದರಿಂದ ಷಹಜಿ ಅಪಾರ ಸೈನಿಕರು ಮತ್ತು ಕುದುರೆಗಳನ್ನು ಕಳೆದುಕೊಳ್ಳುವುದರ ಜೊತೆಗೆ ಮಿತವಾದ ಹಣವನ್ನು ನಾಯಕನಿಗೆ ಕೊಟ್ಟು ಮೈಸೂರು ರಾಜಕೀಯದಿಂದ ದೂರವಿದ್ದನು.

ಕ್ರಿ.ಶ.೧೬೪೮ನೇ ಜನವರಿ ೧೨ ರಂದು ಮುಸ್ತಾಫ್ ಖಾನನು ೧೭,೦೦೦ ಕುದುರೆಗಳನ್ನೊಳಗೊಂಡು ಷಹಜಿಯೊಡನೆ ಕರ್ನಾಟಕದ ಮೇಲೆ ದಂಡಯಾತ್ರೆ ಹೊರಟನು. ಇಬ್ಬರೂ ಗೋಲ್ಕಂಡ ಸೈನ್ಯವನ್ನು ಓಡಿಸಿ ಜಿಂಜಿಯನ್ನು ತಲುಪಿದರು. ನಂತರ ಷಹಜಿಯು ಜಿಂಜಿಯಿಂದ ಹೊರಟು ಒಂದೇ ದಿನದಲ್ಲಿ ಜಂಗಮ ಮತ್ತು ತ್ರಿನೊಮಲಿ ಎಂಬ ಎರಡು ಕೋಟೆಗಳನ್ನು ಹಿಡಿದುಕೊಂಡನು.

ಹೊಸಕೋಟೆಯ ನಿರ್ಮಾಪಕ ಸುಗಟೂರಿನ ತಮ್ಮೇಗೌಡ ಕ್ರಿ.ಶ.೧೫೯೫ರಿಂದ ೧೬೩೨ರವರೆಗೆ ರಾಜ್ಯಭಾರ ಮಾಡಿದನು. ಕೊಂಚ ಕಾಲದ ತರುವಾಯ ಅವನ ಪ್ರಾಂತ್ಯವು ಬಿಜಾಪುರದ ನವಾಬನಿಂದ ಪರಾಜಿತವಾಯಿತು. ಆಗ ಕರ್ನಾಟಕ-ಬಿಜಾಪುರದ ಮಾಂಡಲೀಕನಾಗಿ ಬೆಂಗಳೂರಿನಲ್ಲಿ ನೆಲೆಸಿದ್ದ ಷಹಜಿಗೆ ಈ ಪ್ರದೇಶ ಜಹಗೀರಿಯ ರೂಪದಲ್ಲಿ ದೊರೆಯಿತು. ಕ್ರಿ.ಶ.೧೬೬೩ರಲ್ಲಿ ಈ ಪ್ರಾಂತ್ಯಗಳನ್ನು ಮೊಗಲ್ ದಳಪತಿಯಾದ ಖಾಸಿಂಖಾನನು ವಶಪಡಿಸಿಕೊಂಡನು. ಮತ್ತೆ ಅವು ಸಿರಾ ಪ್ರಾಂತ್ಯದ ಭಾಗವಾದವು.

ಕ್ರಿ.ಶ.೧೬೩೭ ರಿಂದ ೧೬೪೮ರವರೆಗೆ ರಣದುಲ್ಲಾಖಾನ್, ಮುಸ್ತಾಫ್ ಖಾನ್, ಖಾನ್ ಮಹಮಾದ್ ಮತ್ತಿತರ ಬಲಿಷ್ಟರಾದ ಸೇನಾಪತಿಗಳ ನಾಯಕತ್ವದಲ್ಲಿ, ಪ್ರತಿವರ್ಷವೂ ಕರ್ನಾಟಕದ ಮೇಲೆ ಮಹಮದ್ ಆದಿಲ್‌ಶಾಹನು ದಂಡಯಾತ್ರೆ ನಡೆಸುತ್ತಿದ್ದನು. ಬೆಂಗಳೂರನ್ನು ತನ್ನ ಕಾರ್ಯ

ಚಟುವಟಿಕೆಗಳ ಕೇಂದ್ರವನ್ನಾಗಿ ಮಾಡಿಕೊಂಡು ಷಹಜಿ ಈ ಎಲ್ಲಾ ದಂಡಯಾತ್ರೆಗಳಲ್ಲೂ ಪ್ರಧಾನ ಪಾತ್ರವಹಿಸಿದನು. ಕರ್ನಾಟಕದಲ್ಲಿ ಸ್ವತಂತ್ರವಾದ ರಾಜ್ಯವನ್ನು ಸ್ಥಾಪಿಸಬೇಕೆಂಬ ಷಹಜಿಯ ಉತ್ಕಟಾಕಾಂಕ್ಷೆ ಹಾಗೂ ಮೈಸೂರಿನ ವಿರುದ್ಧವಾಗಿ ದಂಡಯಾತ್ರೆಗಳನ್ನು ನಡೆಸಿ, ಈ ಎಲ್ಲಾ ದಂಡಯಾತ್ರೆಗಳಲ್ಲೂ ಷಹಜಿ ಸಹಕರಿಸಬೇಕೆಂಬ ಸುಲ್ತಾನನ ಆಜ್ಞೆ, ಇವು ಮೈಸೂರು-ಮರಾಠರ ಹಾಗೂ ಮೈಸೂರು ಬಿಜಾಪುರದವರ ಮಧುರ ಬಾಂಧವ್ಯಕ್ಕೆ ಮಾರಕವಾಗಿದ್ದವು.

ಷಹಜಿ ಕರ್ನಾಟಕಕ್ಕೆ ಬಂದ ಮೇಲೆ ಬಿಜಾಪುರದ ಕೀರ್ತಿ ಪ್ರತಿಷ್ಠೆಗಾಗಿ ದುಡಿದನು. ಅವನಿಗೆ ಕರ್ನಾಟಕದ ಮೇಲೆ ದಂಡಯಾತ್ರೆ ಕೈಗೊಳ್ಳಲು ಪ್ರೇರೇಪಿಸಿದ್ದು ಐಶ್ವರ್ಯದಾಹ ಮತ್ತು ಭೂಮಿದಾಹ. ಐಶ್ವರ್ಯ ಬಿಜಾಪುರಕ್ಕೆ ಹೋಗಿ ಭೂಮಿ ಷಹಜಿಗೆ ಉಳಿದು, ಇವನು ಕರ್ನಾಟಕದಲ್ಲಿ ಬಲಿಷ್ಠನಾಗಿ ಮೈಸೂರು ರಾಜನ ವಿರುದ್ಧ ಹೋರಾಡಬೇಕಾಯಿತು.[೧೮]

ಕ್ರಿ.ಶ.೧೬೬೧ರಲ್ಲಿ ಟೆಗ್ನಾಟಂ(ಕಡಲೂರು) ಪೋರ್ಟೋನೋವಾಗಳನ್ನು ಸಾಧಿಸುವ ಕಾರ್ಯದಲ್ಲಿ ಷಹಜಿ ಜಯಶೀಲನಾದನು. ಬಿಜಾಪುರದ ಸುಲ್ತಾನನಿಗೂ ಶಿವಾಜಿಗೂ ರಾಜಿ ಮಾಡುವುದಕ್ಕೋಸ್ಕರ ಷಹಜಿ ೧೬೬೨ರಲ್ಲಿ ಪೂನಾಕ್ಕೆ ಭೇಟಿಕೊಟ್ಟು ನಂತರ ೧೬೬೨ರ ಕೊನೆಗೆ ಬೆಂಗಳೂರಿಗೆ ಆಗಮಿಸಿದನು.

ಕ್ರಿ.ಶ.೧೬೩೮ರಲ್ಲಿ ಬಿಜಾಪುರದ ಮಹಮದ್ ಆದಿಲ್‌ಷಾಹನು ಕರ್ನಾಟಕದ ಮೇಲೆ ದಂಡಯಾತ್ರೆ ನಡೆಸಿದುದರ ಪರಿಣಾಮವಾಗಿ ಮರಾಠ ಸೇನಾನಾಯಕನಾದ ಷಹಜಿಗೆ ಬೆಂಗಳೂರು ದೊರೆಯಿತು. ೧೬೩೮ನೇ ಡಿಸೆಂಬರ್‌ನಲ್ಲಿ ಬೆಂಗಳೂರನ್ನು ಪಡೆದುಕೊಂಡ ಷಹಜಿಯು ಸಾಯುವವರೆಗೆ(೧೬೬೪) ಕರ್ನಾಟಕ ಮತ್ತು ಇಡೀ ದಕ್ಷಿಣ ಭಾರತದ ರಾಜಕೀಯದಲ್ಲಿ ಪ್ರಧಾನ ಪಾತ್ರವನ್ನು ವಹಿಸಿದನು.

ಷಹಜಿ ತನ್ನ ಕೀರ್ತಿ ಧ್ವಜವನ್ನು ಎತ್ತಿ ಹಿಡಿದುದು ಕ್ರಿ.ಶ.೧೬೫೪ರಲ್ಲಿ. ಈ ವೇಳೆಗೆ ಕರ್ನಾಟಕ ದಲ್ಲಿದ್ದ ಆದಿಲ್‌ಷಾಹಿ ಪ್ರದೇಶಗಳನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ಹೊತ್ತು ಸುಲ್ತಾನನಿಗೆ ಬೆಂಬಲವಾಗಿ ನಿಂತವನೇ ಷಹಜಿ. ಈ ವೇಳೆಗೆ ಏಕೋಜಿ ಬೆಂಗಳೂರಿನಲ್ಲಿದ್ದನು. ಸಂಬಾಜಿ ತನ್ನ ತಂದೆ ಸಂಗಡ ಕನಕಗಿರಿಯಲ್ಲಿದ್ದನು. ಕ್ರಿ.ಶ.೧೬೫೪ರ ವೇಳೆಗೆ ಕರ್ನಾಟಕದಲ್ಲಿ ಪ್ರಾರಂಭವಾದ ಬಿಜಾಪುರ ಮತ್ತು ಗೋಲ್ಕಂಡ ಯುದ್ಧಗಳು ಕೊನೆಗೊಂಡವು. ಬೆಂಗಳೂರು, ಹೊಸಕೋಟೆ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಕೋಲಾರ ಮತ್ತು ಸಿರಾವನ್ನೊಳಗೊಂಡ ಹಾಗೂ ಮೈಸೂರು ರಾಜ್ಯಕ್ಕೆ ಉತ್ತರ ಭಾಗದಲ್ಲಿದ್ದ ಬಿಜಾಪುರಕ್ಕೆ ಸೇರಿದ ಪ್ರದೇಶಗಳು "ಕರ್ನಾಟಕ-ಬಿಜಾಪುರ-ಬಾಲ್ಘಾಟ್" ಎಂಬ ಹೆಸರನ್ನು ಪಡೆದವು. ಕನಕಗಿರಿಯನ್ನು ಸೇರಿಕೊಂಡ ಎಲ್ಲಾ ಪ್ರದೇಶಗಳನ್ನು ಷಹಜಿ ದಕ್ಷತೆಯಿಂದ ಆಳುತ್ತಿದ್ದನು.[೧೯]

ಫ್ರೆಡರಿಕ್ ಚಾರ್ಲ್ಮರ್ಸ್ ಪ್ರಕಾರ- ಈ ಪ್ರದೇಶದಲ್ಲಿ ಗಣನೀಯ ಪ್ರಮಾಣದಲ್ಲಿ ಭೂ ಅಳತೆ ಹಾಗೂ ಕಂದಾಯ ವಿಧಿಸುವ ವಿಧಾನಗಳಲ್ಲಿ ವೈವಿಧ್ಯತೆ ಇದ್ದುದಾಗಿ ತಿಳಿದುಬರುತ್ತದೆ. ಸಿರಾದಲ್ಲಿ 'ಸ್ಟುಲ್' ಅಥವಾ 'ಸ್ಥಳೀಯ ಕೋಡು' ಎಂಬ ಅಳತೆ ಪದ್ಧತಿ (೧೭,೨೮೦ ಚದುರಗಜ) ಇದ್ದಿತು.

ಹೀಗೆ ತನ್ನ ೨೬ ವರ್ಷದ ಜೀವಿತವನ್ನು ಕರ್ನಾಟಕದಲ್ಲಿ ಕಳೆದ ಷಹಜಿ ಕ್ರಿ.ಶ.೧೬೬೪ರಲ್ಲಿ ಮರಣ ಹೊಂದಿದನು. ತಂಜಾವೂರಿನಿಂದ ಬಿಜಾಪುರಕ್ಕೆ ಹಿಂದಿರುಗುವಾಗ ಸಿರಾದ ಬಳಿ ರೋಗಕ್ಕೆ ತುತ್ತಾಗಿ ಷಹಜಿ ಮರಣ ಹೊಂದಿದನು ಎಂಬುದಾಗಿ ಲಿಂಗಣ್ಣಕವಿ ತಿಳಿಸುತ್ತಾನೆ. ಷಹಜಿಯು ಬೇಟೆಯಾಡುವಾಗ ಸತ್ತನೆಂದು ಪ್ರಚಾರದಲ್ಲಿರುವ ವದಂತಿ.

ಗ್ರಾಂಡ್ ಡಫ್ ಮತ್ತು ಬಾಲಕೃಷ್ಣ ಎಂಬ ಇತಿಹಾಸಕಾರರು 'ಷಹಜಿ ಬಸವಾಪಟ್ಟಣದಲ್ಲಿ ತೀರಿಕೊಂಡನೆಂದು' ತಿಳಿಸುತ್ತಾರೆ. ಷಹಜಿ ಮರಣಹೊಂದಿದ ಕೆಲವು ವರ್ಷಗಳ ನಂತರ ೧೬೭೩ನೇ ಮೇ ತಿಂಗಳಲ್ಲಿ ಚಿಕ್ಕದೇವರಾಯ ಸ್ವತಂತ್ರನಾದನು. ಮರಾಠರು ಮತ್ತು ಮೊಗಲರ ಘರ್ಷಣೆ ಸಂಭವಿಸಿದುದು ಈ ಕಾಲದಲ್ಲೇ. ಚಿಕ್ಕದೇವರಾಜನು ಮರಾಠರೊಡನೆ ಹೋರಾಡಿ ಮೊಗಲರೊಂದಿಗೆ ಸ್ನೇಹದಿಂದ ಇದ್ದನು. ಕಾರಣ ರಾಜಕೀಯವಾಗಿ ತನ್ನ ಸೇನಾಬಲವನ್ನು ಅಭಿವೃದ್ಧಿಪಡಿಸಿಕೊಳ್ಳುವುದೇ ಆಗಿತ್ತು. ಷಹಜಿಯ ನಂತರ ಅಧಿಕಾರಕ್ಕೆ ಬಂದ ಏಕೋಜಿ ಮೈಸೂರಿನ ಅತಿಕ್ರಮಣ ಮತ್ತು ಮಧುರೆ ರಾಜ್ಯದಲ್ಲಿ ಉದ್ಭವಿಸಿದ ರಾಜಕೀಯ ಗೊಂದಲದಿಂದ ಕ್ರಿ.ಶ.೧೬೭೫ರ ಸುಮಾರಿಗೆ ತನ್ನ ರಾಜಧಾನಿಯನ್ನು ಬೆಂಗಳೂರಿನಿಂದ ತಂಜಾವೂರಿಗೆ ವರ್ಗಾವಣೆ ಮಾಡಿದನು.[೨೦] ಈ ಮಧ್ಯೆ ಆತನ ಸೋದರ ಶಿವಾಜಿಯ ಮಗ ಸಂಬಾಜಿಯ(೧೬೮೦-೮೯) ಪ್ರಬಲ ಸೇನಾನಿಯಾಗಿದ್ದ ಹರಜಿಯ ನೇತೃತ್ವದಲ್ಲಿ ಬೆಂಗಳೂರಿನ ಆಡಳಿತ ನಡೆಯುತ್ತಿತ್ತು. ಇದರಿಂದಾಗ ಕರ್ನಾಟಕ-ಬಿಜಾಪುರ-ಬಾಲ್ಘಾಟ್ ಪ್ರದೇಶಕ್ಕೆ ಕಾಲಿರಿಸಲು ಚಿಕ್ಕದೇವರಾಜನಿಗೆ ಅವಕಾಶ ಸಿಕ್ಕಿತು. ಚಿಕ್ಕದೇವರಾಜನ ಇಂಗಿತವನ್ನು ಅರಿತ ಬಿಜಾಪುರ ಸುಲ್ತಾನನು ಆ ಪ್ರದೇಶಗಳು ರಾಯನ ವಶವಾಗುವ ಮುನ್ನವೇ ಮುಂಜಾಗ್ರತಾ ಕ್ರಮಗಳನ್ನು ಕೈಗೊಂಡು ಆ ಪ್ರದೇಶಕ್ಕೆ ಜಹಂಗೀರ್‌ಖಾನ್ ಮತ್ತು ಹುಸೇನ್‌ಖಾನರನ್ನು ನೇಮಿಸಿದನು.

ಕ್ರಿ.ಶ.೧೬೭೬ರಲ್ಲಿ ರಣದುಲ್ಲಾಖಾನನು ಹೊರಡಿಸಿದ ಶಾಸನದಿಂದ ಕರ್ನಾಟಕ-ಬಿಜಾಪುರ-ಬಾಲ್ಘಾಟ್ ಪ್ರಾಂತ್ಯದಲ್ಲಿ ಆಡಳಿತವು ಹಿಂದೂ ಮತ್ತು ಮಹಮದೀಯರ ಆಧೀನದಲ್ಲಿತ್ತೆಂದು ತಿಳಿದುಬರುತ್ತದೆ.

ಈ ವೇಳೆಗೆ ಶಿವಾಜಿಯು ಔರಂಗಜೇಬನ ಮುಂದೆ ತಾನು ವಿಜಯನಗರದ ಚಕ್ರವರ್ತಿಗಳ ಉತ್ತಾರಾಧಿಕಾರಿಯಾಗಿ ನಿಲ್ಲಬೇಕೆಂಬ ಪ್ರಬಲ ಆಕಾಂಕ್ಷೆ ಹೊಂದಿದ್ದನು. ದಕ್ಷಿಣ ಭಾರತದ ಹಿಂದೂ ಸಾಮ್ರಾಜ್ಯವನ್ನು ಪುನರುಜ್ಜೀವನಗೊಳಿಸುವ ಭಾವನೆಯನ್ನು ಅವನ ದಕ್ಷಿಣ ಭಾರತ ದಂಡಯಾತ್ರೆಗಳಲ್ಲಿ ಕಾಣಬಹುದು ಎಂದು ಆರ್. ಸತ್ಯನಾಥ ಅಯ್ಯರ್ ಅವರ ಅಭಿಪ್ರಾಯ.

ಶಿವಾಜಿ ತನ್ನ ದಾಳಿಯನ್ನು ಪಿತೃರಾಜ್ಯವಾದ ಬೆಂಗಳೂರು, ಕೋಲಾರ, ಹೊಸಕೋಟೆ, ಸಿರಾ ಮತ್ತು ಚಿಕ್ಕಬಳ್ಳಾಪುರದ ಕಡೆಗೆ ವಿಸ್ತರಿಸಿದನು. ಈ ಪ್ರಾಂತ್ಯಗಳೆಲ್ಲವು ತಂಜಾವೂರಿನ ಏಕೋಜಿಯ ಅಧಿಕಾರಕ್ಕೆ ಒಳಪಟ್ಟಿದ್ದವು. ಶಿವಾಜಿ ದಕ್ಷಿಣದ ತನ್ನ ಆಕ್ರಮಿತ ಪ್ರದೇಶಗಳೆಲ್ಲವನ್ನೂ ತನ್ನ ತಮ್ಮನ

ಪತ್ನಿಯಾದ ದೀಪಾಬಾಯಿಗೆ ವಹಿಸಿಕೊಟ್ಟನೆಂದು ಹೇಳಲಾಗಿದೆ. ಏಕೋಜಿಗೆ ಬರೆದ ಪತ್ರದಲ್ಲಿ ಶಿವಾಜಿ "ಎರಡು ಲಕ್ಷ ಹೊನ್ನು ವರಮಾನವಿರುವ ಬೆಂಗಳೂರು, ಹೊಸಕೋಟೆ, ಸಿರಾ ಪ್ರದೇಶಗಳನ್ನೆಲ್ಲವನ್ನು ನಾವು ಆಕ್ರಮಿಸಿಕೊಂಡಿರುತ್ತೇವೆ. ಇವುಗಳ ಆಡಳಿತವನ್ನು ಸರಿಯಾದ ರೀತಿಯಲ್ಲಿ ನಡೆಸಿದರೆ ೫ ಲಕ್ಷ ರೂಪಾಯಿಗಳ ವರಮಾನ ಬರುವಂತೆ ಮಾಡಬಹುದು. ಈ ಪ್ರದೇಶಗಳನ್ನು ಸ್ವಯಂ ಬಳುವಳಿಯಾಗಿ ನಾದಿನಿ ದೀಪಾಬಾಯಿಗೆ ಕೊಡುತ್ತಿದ್ದೇನೆ. ಏಕೋಜಿ ಇವುಗಳ ಆಡಳಿತ ಮೇಲ್ವಿಚಾರಣೆ ನಡೆಸಬಹುದು. ಆದರೆ ಅವುಗಳ ಮೇಲೆ ಹಕ್ಕನ್ನು ಸ್ಥಾಪಿಸಬಾರದು" ಎಂದು ತಿಳಿಸಿದನು.

ಶಿವಾಜಿ ತನ್ನ ಸೋದರ ಏಕೋಜಿಗೆ ಬರೆದ ಈ ಪತ್ರದಿಂದ ಅವರಿಬ್ಬರಿಗೂ ವೈಷಮ್ಯ ಭಿನ್ನಾಭಿಪ್ರಾಯಗಳು ತಲೆದೋರಲು ಮರಾಠ ಆಕ್ರಮಿತ ಪ್ರದೇಶಗಳಾದ ಬೆಂಗಳೂರು, ಕೋಲಾರ, ದೊಡ್ಡಬಳ್ಳಾಪುರ, ಹೊಸಕೋಟೆ, ಸಿರಾ ಮತ್ತಿತರ ಪ್ರದೇಶಗಳೇ ಮೂಲ ಕಾರಣವೆಂದು ತಿಳಿದುಬರುತ್ತದೆ. ಶಿವಾಜಿ ಬರೆದ ಆ ಕಾಗದದಲ್ಲಿ ತಾನೇ ಕೆಲವು ಷರತ್ತುಗಳ ಒಪ್ಪಂದವನ್ನು ಸೂಚಿಸಿದ್ದನು. ಕೋಶಾಗಾರದಲ್ಲಿರುವ ದ್ರವ್ಯ ಮತ್ತು ಒಡವೆಗಳಲ್ಲಿ ಅರ್ಧ ಭಾಗವನ್ನು, ಸೈನ್ಯ ಪಡೆಯಲ್ಲಿರುವ ಆನೆ ಕುದುರೆಗಳಲ್ಲಿ ಅರ್ಧದಷ್ಟನ್ನು ತನಗೆ ಕೊಡಬೇಕೆಂದು ಕೇಳಿದುದ್ದಲ್ಲದೆ, ಅರ್ಣಿ, ಬೆಂಗಳೂರು, ಕೋಲಾರ, ಹೊಸಕೋಟೆ, ಸಿರಾ ಮತ್ತಿತರ ಸಣ್ಣಪುಟ್ಟ ಪ್ರದೇಶಗಳನ್ನು ತನಗೆ ಕೊಡಬೇಕೆಂದು ಶಿವಾಜಿ ಆ ಕಾಗದದಲ್ಲಿ ಏಕೋಜಿಯನ್ನು ಕೇಳಿದ್ದನು. ಆದರೆ ಕೆಲವೇ ದಿನಗಳಲ್ಲಿ ಶಿವಾಜಿ ಕರ್ನಾಟಕದ ಎಲ್ಲ ಚರ-ಸ್ಥಿರ ಆಸ್ತಿಗಳನ್ನು ಏಕೋಜಿಗೆ ವಹಿಸಿಕೊಟ್ಟನು.[೨೧]

ಷಹಜಿ ಕಷ್ಟಪಟ್ಟು ಕಟ್ಟಿದ ಬೆಂಗಳೂರು ಪ್ರದೇಶಕ್ಕೆ ಏಕೋಜಿಯ ಕಾಲದಲ್ಲಿ ದೊಡ್ಡ ಕೊಡಲಿ ಪೆಟ್ಟು ಬಿದ್ದಿತು. ರಾಜಧಾನಿಯ ಬದಲಾವಣೆಯಿಂದ ಮೈಸೂರಿಗೆ ಅನುಕೂಲವಾಯಿತು. ರಾಜಧಾನಿಯ ಬದಲಾವಣೆಯ ನಂತರ ಏಕೋಜಿ ಬೆಂಗಳೂರಿನ ಮೇಲೆ ತನ್ನ ಅಧಿಕಾರವನ್ನಿಟ್ಟುಕೊಂಡಿದ್ದು, ೧೬೮೭ರಲ್ಲಿ ಅದನ್ನು ಬೇರೆಯವರಿಗೆ ಮಾರಿಬಿಟ್ಟನು. ಈ ರೀತಿ ದೊಡ್ಡ ದೇವರಾಜ ಒಡೆಯರು ಮತ್ತು ಏಕೋಜಿಯವರ ಬಾಂಧವ್ಯ ಉತ್ತಮಗೊಳ್ಳಲಿಲ್ಲ.

ಕ್ರಿ.ಶ.೧೬೮೨ರ ವೇಳೆಗೆ ಔರಂಗಜೇಬನು ಬಿಜಾಪುರ ಮತ್ತು ಗೋಲ್ಕಂಡಗಳನ್ನು ಆಕ್ರಮಿಸುವುದೆಂದು ನಿಶ್ಚಯಿಸಿದ್ದನು. ಈ ವೇಳೆಗೆ ಸಂಬಾಜಿ ಕುತುಬ್‌ಷಹನ ಸಹಕಾರವನ್ನು ಪಡೆದು ಮೈಸೂರಿನ ಮೇಲೆ ದಾಳಿ ನಡೆಸಿದನು. ಕ್ರಿ.ಶ.೧೬೮೪ರಲ್ಲಿ ಬಿಜಾಪುರ ಸುಲ್ತಾನನಿಂದ ಸಿಕಂದರ್‌ಷಹನು ಔರಂಗಜೇಬನಿಗೆ ಉದ್ರೇಕಗೊಳಿಸುವಂತಹ ಕಾಗದವೊಂದನ್ನು ಬರೆದು ಅವನ ಮನಸ್ಸನ್ನು ನೋಯಿಸಿದ್ದನು. ಈ ಕಾಗದದ ಆಧಾರದ ಮೇಲೆ ಸಂಬಾಜಿ ಮತ್ತು ಬಿಜಾಪುರದ ಸುಲ್ತಾನ ಪರಸ್ಪರ ಅನ್ಯೋನ್ಯವಾಗಿದ್ದರೆಂದು ಔರಂಗಜೇಬನು ಲೆಕ್ಕಚಾರ ಹಾಕಿದನು. ಈ ಕಾರಣಗಳಿಂದ ಸಂಬಾಜಿಯನ್ನು ನಿರ್ನಾಮ ಮಾಡುವುದರಲ್ಲಿ ಬಿಜಾಪುರ ಮತ್ತು ಗೋಲ್ಕಂಡ ರಾಜ್ಯಗಳು ಅಡಚಣೆಯನ್ನುಂಟು ಮಾಡುತ್ತಿವೆ ಎಂದು ಔರಂಗಜೇಬನು ಊಹಿಸಿದನು. ಈತನು ತನ್ನ ಶಕ್ತಿ ಸಾಮರ್ಥ್ಯಗಳಿಂದ ಬಿಜಾಪುರ ಕೋಟೆಗೆ ಮುತ್ತಿಗೆ ಹಾಕಿ ಅದನ್ನು

ಧ್ವಂಸ ಮಾಡಲು ಅನುವಾದನು. ಕ್ರಿ.ಶ.೧೬೮೬ನೇ ಸೆಪ್ಟೆಂಬರ್ ೧೩ ರಂದು ಬಿಜಾಪುರ ಮತ್ತು ೧೬೮೭ ಸೆಪ್ಟೆಂಬರ್ ೨೧ ರಂದು ಗೋಲ್ಕಂಡ ರಾಜ್ಯಗಳು ನೆಲಸಮವಾದವು. ಈ ಎರೆಡು ರಾಜವಂಶಗಳ ಪತನಕ್ಕೆ ಮೈಸೂರಿನ ಚಿಕ್ಕದೇವರಾಜ ಒಡೆಯರ ಸಹಾಯವಿದ್ದಿತು ಎನ್ನಬಹುದು.

ಕ್ರಿ.ಶ.೧೬೮೭ನೇ ಮೇ ತಿಂಗಳಲ್ಲಿ ಚಿಕ್ಕದೇವರಾಜನು ಮುಖ್ಯ ಮರಾಠಿ ಪ್ರದೇಶಗಳಾದ ಚಿಕ್ಕನಾಯಕನಹಳ್ಳಿ, ಕಂದಿಕೆರೆ ಮತ್ತು ತ್ಯಾಮಗೊಂಡ್ಲುಗಳನ್ನು ಆಕ್ರಮಣ ಮಾಡಿ ಅವುಗಳನ್ನು ಮೈಸೂರು ರಾಜ್ಯಕ್ಕೆ ಸೇರಿಸಿಕೊಂಡನು. ಈ ಪ್ರದೇಶಗಳು ಮೈಸೂರಿಗೆ ಸೇರಿಕೊಂಡಿದ್ದು ಏಕೋಜಿಯನ್ನು ಬಡಿದೆಬ್ಬಿಸಿದವು. ರಾಜ್ಯದ ವಿಸ್ತರಣೆಯಿಂದ ಆ ದಿಕ್ಕಿನಲ್ಲಿರುವ ತನ್ನ ಪ್ರದೇಶಗಳಿಗೆ ಉಳಿಗಾಲವಿಲ್ಲವೆಂದು ಅವನು ಭಾವಿಸಿದನು. ಇದರಿಂದ ಕರ್ನಾಟಕ-ಬಿಜಾಪುರ-ಬಾಲ್ಘಾಟ್‌ನಲ್ಲಿ ಏಕೋಜಿಯ ಅಧಿಕಾರ ಅವನತಿಯ ಹಾದಿ ಹಿಡಿದಿತ್ತೆಂದು ಈ ಆಕ್ರಮಣಗಳು ಸ್ಥಿರಪಡಿಸಿದವು.[೨೨]

ಕರ್ನಾಟಕದಲ್ಲಿ ಸಂಬಾಜಿ ಕೈಗೊಂಡ ಕಾರ್ಯಕ್ರಮಗಳು ಮೊಗಲ್ ಚಕ್ರವರ್ತಿ ಔರಂಗಜೇಬನಿಗೆ ತಿಳಿದು ಮರಾಠರ ಕೈವಶದಲ್ಲಿದ್ದ ಬೆಂಗಳೂರನ್ನು ಆಕ್ರಮಿಸಲು ಅಸಂಖ್ಯಾತ ಸೈನ್ಯವನ್ನು ಕಳುಹಿಸಿದನು. ಇದು ಕರ್ನಾಟಕದಲ್ಲಿದ್ದ ಮರಾಠರ ಪ್ರದೇಶಗಳನ್ನು ಒಂದಾದ ಮೇಲೊಂದರಂತೆ ಆಕ್ರಮಿಸಿ ಬಿಡಬೇಕೆಂದು ಔರಂಗಜೇಬನು ತೀರ್ಮಾನಿಸಿದಂತೆ ಕಾಣುತ್ತದೆ. ದಕ್ಷಿಣಾಭಿಮುಖವಾಗಿ ಈಗಾಗಲೇ ಹೊರಟಿದ್ದ ಕೇಶವ ಪಂತ್ ಮತ್ತು ಸಂತಾಜಿ ಘೋರ್ಪಡೆಯವರನ್ನು ಹಿಂಬಾಲಿಸಿಕೊಂಡು ಹೋಗಿ ಸೆರೆ ಹಿಡಿಯುವಂತೆ ಸಲಹೆ ಕೊಟ್ಟು ಔರಂಗಜೇಬನು ಖಾಸಿಂಖಾನನನ್ನು ಮೊಗಲ್ ಸೈನ್ಯದೊಂದಿಗೆ ಕಳುಹಿಸಿಕೊಟ್ಟನು. ಕ್ರಿ.ಶ.೧೬೮೭ನೇ ಮಾರ್ಚ್ ೧ ರಂದು ಪೆನುಗೊಂಡೆಯ ಮಾರ್ಗವಾಗಿ ಮೊಗಲ್ ಸೈನ್ಯ ತುಮಕೂರು ಕಡೆಗೆ ಹೊರಟಿತು. ತುಮಕೂರನ್ನು ಚಿಕ್ಕದೇವರಾಜನ ಪ್ರದೇಶವೆಂದು ಭಾವಿಸಿ, ಅದನ್ನು ಲೂಟಿ ಮಾಡದೆ ಮೊಗಲರು ಮುಂದೆ ಧಾವಿಸಿದರು. ಮೊಗಲ್ ಸೇನಾಧಿಪತಿಯಾದ ಖಾಸಿಂಖಾನನು ಬೆಂಗಳೂರಿಗೆ ಬಂದು ಅದನ್ನು ಆಕ್ರಮಿಸಿಕೊಂಡು ಕೋಟೆಯ ಮೇಲೆ ೧೬೮೭ನೇ ಜುಲೈ ೧೦ ರಂದು ಮೊಗಲ್ ಧ್ವಜವನ್ನು ಹಾರಿಸಿದನು. ಇದೇ ವೇಳೆಗೆ ಮರಾಠ ಸೈನ್ಯ ಬೆಂಗಳೂರು ಕೋಟೆಯ ಬಳಿ ಬೀಡು ಬಿಟ್ಟಿದ್ದಿತು. ಚಿಕ್ಕದೇವರಾಜನು ಸಹ ಅದೇ ಸಮಯಕ್ಕೆ ಸೇನಾಸಮೇತನಾಗಿ ಬಂದು ಬೆಂಗಳೂರು ಕೋಟೆಯ ಬಳಿ ಠಾಣ್ಯ ಹಾಕಿದನು. ಇಲ್ಲಿ ನಡೆದ ಹೋರಾಟದಲ್ಲಿ ಚಿಕ್ಕದೇವರಾಜನು ಜಯಗಳಿಸಿದನು ಎಂದು ಕೆಲವು ಆಧಾರಗಳು ಹೇಳಿದರೆ, ಮೊಗಲರೊಂದಿಗೆ ಸ್ನೇಹ ಭಾವದಿಂದಿದ್ದು, ತನ್ನ ಶಕ್ತಿಯನ್ನು ಹೆಚ್ಚಿಸಿಕೊಂಡನು ಎಂದು ಕೆಲವು ಆಧಾರಗಳು ತಿಳಿಸುತ್ತವೆ.[೨೩]

ಹೀಗೆ ಔರಂಗಜೇಬನು ಬಿಜಾಪುರ ಮತ್ತು ಗೋಲ್ಕಂಡವನ್ನು ನೆಲಸಮ ಮಾಡಿದ ಮೇಲೆ ಸಿರಾವನ್ನು ಕರ್ನಾಟಕದ ರಾಜಧಾನಿಯನ್ನಾಗಿ ಮಾಡಿ, ಅಲ್ಲಿಗೆ ಖಾಸಿಂಖಾನ್‌ನನ್ನು ಫೌಜುದಾರನ್ನಾಗಿ ನೇಮಕ ಮಾಡಿದನು.

### ೩.೩. ಖಾಸಿಂಖಾನ್(ಕ್ರಿ.ಶ.೧೬೮೭-೧೬೯೮)

ಸಿರಾದ ಫೌಜುದಾರನಾದ ಖಾಸಿಂಖಾನನು ಶ್ರದ್ಧಾವಂತ ಮುಸ್ಲಿಮನೂ ಜನೋಪಕಾರಿಯು ಆಗಿದ್ದನು. ಅವನು ಮುಸ್ಲಿಮರ ವಿಶೇಷ ದಿನಗಳಲ್ಲಿ ಪ್ರಾರ್ಥನೆಯನ್ನಾಗಲಿ ಅನ್ನವಸ್ತ್ರಗಳ ದಾನ ಮಾಡುವುದನ್ನಾಗಲಿ ಪಕೀರರಿಗೂ, ಸಾಧುಸಂತರಿಗೂ ಸೇವೆ ಸಲ್ಲಿಸುವುದನ್ನಾಗಲಿ ಎಂದೂ ತಪ್ಪಿಸಿದವನಲ್ಲ. ಖಾಸಿಂಖಾನನು ನಗರದ ಮಸೀದಿಯಲ್ಲಿ ಪ್ರತಿ ಶುಕ್ರವಾರ ಪ್ರಾರ್ಥನೆ ಸಲ್ಲಿಸಿ ಕುದುರೆಯ ಮೇಲೆ ಹಿಂತಿರುಗುತ್ತಿದ್ದನು. ಈತನ ನಿಷ್ಪಕ್ಷಪಾತವಾದ ಆಳ್ವಿಕೆಯಿಂದ ಯೋಗ್ಯ ನವಾಬನೆಂದು ಹೆಸರು ಪಡೆದು ಜನಪ್ರಿಯತೆ ಗಳಿಸಿದನು.[೨೪]

ಔರಂಗಜೇಬನು ದಿಲ್ಲಿಯಲ್ಲಿ ಸಿಂಹಸನಾಧಿಷ್ಟನಾಗಿದ್ದನು. ಮರಾಠರನ್ನು ಬಿಜಾಪುರ ಮತ್ತು ಗೋಲ್ಕಂಡ ರಾಜ್ಯಗಳನ್ನು ಬಗ್ಗು ಬಡಿಯುವ ಸಲುವಾಗ ಮೊಗಲ್ ಸೈನ್ಯವು ಮತ್ತೊಮ್ಮೆ ದಕ್ಷಿಣಾ ಪಥಕ್ಕೆ ಧೀಂಕಿಟ್ಟಿತು. ಬಿಜಾಪುರವು ಕ್ರಿ.ಶ.೧೬೮೭ರಲ್ಲೂ ಮತ್ತು ಗೋಲ್ಕಂಡವು ಕ್ರಿ.ಶ.೧೬೮೮ರಲ್ಲೂ ಮೊಗಲರ ವಶವಾದವು. ಔರಂಗಜೇಬನು ಕರ್ನಾಟಕದ ದಕ್ಷಿಣದಲ್ಲಿ ಬಿಜಾಪುರಕ್ಕೆ ಅಧೀನವಾಗಿದ್ದ ಪ್ರದೇಶಗಳನ್ನು ಗೆಲ್ಲಲು ಬೂದಿಲಿಂಗಪ್ಪ ಮತ್ತು ಸಿದ್ದಪ್ಪ ಎಂಬ ನಾಯಕರ ನೇತೃತ್ವದಲ್ಲಿ ಬೃಹತ್ ಸೈನ್ಯವನ್ನು ಕಳುಹಿಸಿದನು.[೨೫] ಇದರ ಪರಿಣಾಮವಾಗಿ ಬಸವಾಪಟ್ಟಣ, ಬೂದಿಹಾಳು, ಸಿರಾ, ಪೆನುಗೊಂಡೆ, ದೊಡ್ಡಬಳ್ಳಾಪುರ ಹೊಸಕೋಟೆ ಮತ್ತು ಕೋಲಾರ ಪ್ರಾಂತ್ಯಗಳು ಒಂದು ಗೂಡಿದವು. ಹೀಗೆ ಹರಪನಹಳ್ಳಿ, ಕುಂದರ್ಪಿ, ಆನೆಗೊಂದಿ, ಬಿದನೂರು, ಚಿತ್ರದುರ್ಗ, ಮೈಸೂರು ಪ್ರಾಂತ್ಯಗಳು ಸಾಮಂತ ರಾಜ್ಯಗಳಾಗಿ ಇರುವ ಪ್ರತ್ಯೇಕವಾದುದೊಂದು ರಾಜ್ಯವು ರಚಿತವಾಯಿತು. ಈ ನೂತನ ಪ್ರಾಂತ್ಯಕ್ಕೆ ಸಿರಾವು ರಾಜಧಾನಿಯಾಯಿತು. ಖಾಸಿಂಖಾನನು ನೂತನ ಸಿರಾ ಪ್ರಾಂತ್ಯದ ಫೌಜುದಾರ ಅಥವಾ ಮಂಡಲಾಧಿಪತಿ ಯಾಗಿ ನಿಯುಕ್ತನಾದನು. ಸಿರಾ ಪ್ರಾಂತ್ಯವು ಕ್ರಿ.ಶ.೧೭೫೭ರವರೆಗೆ ಮೊಗಲರ ವಶದಲ್ಲಿದ್ದಿತು.

### ೩.೩.೧. ಬೆಂಗಳೂರು ಆಕ್ರಮಣ (ಕ್ರಿ.ಶ.೧೬೮೭)

ಕ್ರಿ.ಶ.೧೬೮೭ರ ವೇಳೆಗೆ ಚಿಕ್ಕದೇವರಾಜನು ಬೆಂಗಳೂರನ್ನು ಕೊಂಡುಕೊಳ್ಳಲು ಯೋಚಿಸಿದನು. ಈ ವೇಳೆಗೆ ಏಕೋಜಿ ತಂಜಾವೂರಿನಲ್ಲಿ ಪಟ್ಟಭದ್ರನಾಗಿದ್ದನು. ಆದರೆ ದೂರದ ಬೆಂಗಳೂರನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಅಸಾಧ್ಯವಾದ್ದರಿಂದ ಏಕೋಜಿಯು ಬೆಂಗಳೂರನ್ನು ಆದಷ್ಟು ಹೆಚ್ಚು ಬೆಲೆಗೆ ವಿಕ್ರಯಿಸಲು ನಿರ್ಧರಿಸಿದನು. ಈ ಕಾಲಕ್ಕೆ ರಾಜ್ಯವಿಸ್ತರಣೆಗಾಗಿ ವಿಶ್ವಪ್ರಯತ್ನ ಮಾಡುತ್ತಿದ್ದ ಚಿಕ್ಕದೇವರಾಜ ಒಡೆಯರು ಎಲ್ಲರಿಗಿಂತಲೂ ಹೆಚ್ಚು ಬೆಲೆ ನೀಡಿ ಬೆಂಗಳೂರನ್ನು ಕೊಂಡುಕೊಳ್ಳಲು ನಿರ್ಧರಿಸಿದರು. ಬೆಂಗಳೂರು ಹಸ್ತಾಂತರಕ್ಕೆ ಸಂಧಾನ ನಡೆಯುತ್ತಿದ್ದ ಕಾಲದಲ್ಲಿ ಪರಸ್ಪರ ಸ್ಪರ್ಧಿಗಳಾದ ಜಿಂಜಿಯ ಮಂಡಲಾಧಿಪತಿ(ಹರಜಿ) ಹರಿರಾಜನು ಹಾಗೂ ಮೊಗಲರ ಖಾಸಿಂಖಾನನು ಬೆಂಗಳೂರನ್ನು ವಶಪಡಿಸಿಕೊಳ್ಳಲು ಹೊರಟರು. ಕೊನೆಗೆ ಹರಜಿಯ ದಳ ಯಾವುದೇ ಪ್ರತಿಭಟನೆ ಇಲ್ಲದೆ ಹಿಂದಿರುಗಿತು.

ಮೊಗಲರ ಖಾಸಿಂಖಾನನು ಬೆಂಗಳೂರನ್ನು ಆಕ್ರಮಿಸಿದನು. ಆದರೆ ಅವರು ಅಲ್ಲಿದ್ದುದು ನಾಲ್ಕೇ ದಿನ. ಮೊಗಲ್ ಸೇನಾನಿ ಖಾಸಿಂಖಾನನು ಸಿರಾವನ್ನು ತನ್ನ ಕೇಂದ್ರ ಸ್ಥಾನವನ್ನಾಗಿ ಮಾಡಿಕೊಂಡು ಪ್ರಸ್ಥಭೂಮಿಯಲ್ಲೇ ಉಳಿದು, ಬೆಂಗಳೂರನ್ನು ನಿರ್ದಿಷ್ಟ ಧನಕ್ಕೆ ಒಡೆಯರಿಗೆ ವಿಕ್ರಯಿಸಿದನು. ಆದರೂ ದಕ್ಷಿಣದಲ್ಲಿ ಮೊಗಲರ ಮುಂದಿನ ಯುದ್ಧ ಕಾರ್ಯಕ್ರಮಗಳಿಗೆ ಬೆಂಗಳೂರು ಸೈನಿಕ ಮೂಲ ಸ್ಥಾನವಾಯಿತು. ಕ್ರಿ.ಶ.೧೬೯೧ರಲ್ಲಿ ಖಾಸಿಂಖಾನನ ನೇತೃತ್ವದ ಬೆಂಗಳೂರು ಸೇನೆ ತಂಜಾವೂರು ತಿರುಚನಾಪಳ್ಳಿಗೆ ಮುತ್ತಿಗೆ ಹಾಕಿ ಅಲ್ಲಿಂದ ಕಪ್ಪ-ಕಾಣಿಕೆಗಳನ್ನು ಸಂಗ್ರಹಿಸಿತು.[೨೬]

ಕ್ರಿ.ಶ.೧೬೮೭ರಲ್ಲಿ ಹೊಸಕೋಟೆ ಪ್ರದೇಶವು ಮೊಗಲರ ವಶವಾಯಿತು. ಸಿರಾವನ್ನು ಕೇಂದ್ರವಾಗಿಟ್ಟುಕೊಂಡು ಖಾಸಿಂಖಾನನು ಆಳತೊಡಗಿದನು. ಈ ವೇಳೆಯಲ್ಲಿ ಯೂಸಫ್ ಜಿ ಎಂಬ ಮುಸ್ಲಿಮ್ ಸೈನಿಕನಿಗೆ ಕ್ರಿ.ಶ.೧೬೮೮ರಲ್ಲಿ ಮುಳಬಾಗಿಲು ಪ್ರದೇಶವನ್ನು ಆತನ ಪರಾಕ್ರಮಕ್ಕೆ ಮೆಚ್ಚಿ ದತ್ತಿ ಬಿಟ್ಟ ವಿವರವಿದೆ. ಇದು ಪ್ರಾಯಶಃ ಮೊಗಲರು ಇವರೊಂದಿಗಿಟ್ಟಿದ್ದ ಸಂಬಂಧಗಳ ಕುರುಹು ಎನ್ನಬಹುದು. ಕ್ರಿ.ಶ.೧೬೮೭ ಮತ್ತು ೧೬೯೩ರ ನಂತರದ ಶಾಸನಗಳು ಮೊಗಲ್ ಮರಾಠರ ಅಧಿಕಾರ ಪ್ರಾಬಲ್ಯದ ಸೂಚನೆಗಳನ್ನು ನೀಡುತ್ತವೆ ಎಂದು ಪಿ.ವಿ.ಕೃಷ್ಣಮೂರ್ತಿಯವರು ತಮ್ಮ 'ಸುಗಟೂರು ಪ್ರಭುಗಳು' ಎಂಬ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.

### ೩.೩.೨. ದೊಡ್ಡಬಳ್ಳಾಪುರ ಆಕ್ರಮಣ(ಕ್ರಿ.ಶ.೧೬೮೯)

ಬಿಜಾಪುರದ ಸೇನೆ ರಣದುಲ್ಲಾಖಾನನ ನೇತೃತ್ವದಲ್ಲಿ ಬಂದು ದೊಡ್ಡಬಳ್ಳಾಪುರವನ್ನು ಆಕ್ರಮಿಸಿಕೊಂಡಿತು. ಆ ತರುವಾಯ ನಲವತ್ತು ವರ್ಷಗಳ ಕಾಲ ದೊಡ್ಡಬಳ್ಳಾಪುರವು ಬಿಜಾಪುರದ ಅಧೀನದಲ್ಲಿತ್ತು. ಕೊನೆಗೆ ಅದು ಮರಾಠರ ಕೈಸೇರಿತು. ಮರಾಠರು ದುರ್ಗವನ್ನು ವಿಸ್ತರಿಸುದುದಷ್ಟೆ ಅಲ್ಲದೆ ನಾನಾ ಗುಡಿಗೋಪುರಗಳನ್ನು ನಿರ್ಮಿಸಿದರು. ಆದರೆ ಕ್ರಿ.ಶ.೧೬೮೯ರಲ್ಲಿ ದೊಡ್ಡಬಳ್ಳಾಪುರವನ್ನು ಮೊಗಲ್ ಸೇನೆ ಖಾಸಿಂಖಾನನ ನೇತೃತ್ವದಲ್ಲಿ ಬಂದು ತರುಬಿತು. ಮರಾಠರ ಶಿವದೂದ್‌ನ ಮಗನಾದ ಶಂಭೂದೂದನ ಸೇನೆ ಪ್ರಾಣದ ಮೇಲಿನ ಹಂಗನ್ನು ತೊರೆದು ಎರಡು ತಿಂಗಳುಗಳ ಕಾಲ ಭೀಕರವಾಗಿ ಹೋರಾಟ ಮಾಡಿದರೂ ಫಲವಿಲ್ಲದಂತಾಯಿತು. ಕೊನೆಗೆ ದೊಡ್ಡಬಳ್ಳಾಪುರವು ಮೊಗಲರ ವಶವಾಯಿತು. ದೊಡ್ಡಬಳ್ಳಾಪುರ ಮತ್ತು ಸುತ್ತಮುತ್ತಲಿನ ಪ್ರದೇಶವನ್ನು ಒಂದುಗೂಡಿಸಿ ೫೪,೦೫೯ ವರಹ ಕಂದಾಯ ತರುವ ಸಂಘಟಿತ ಪ್ರಾಂತ್ಯವಾಗಿ ನಿರ್ಮಿಸಿ ಅದನ್ನು ಖಾಸಿಂಖಾನನು ಬಲೂಲ್ ಖಾನ್ ಎಂಬ ಪ್ರಿಯ ದಳಪತಿಯೊಬ್ಬನಿಗೆ ಜಹಗೀರು ರೂಪದಲ್ಲಿ ನೀಡಿದನು.

### ೩.೩.೩. ಮರಾಠರೊಡನೆ ಯುದ್ಧ ಹಾಗೂ ಖಾಸಿಂಖಾನನ ಅಂತ್ಯ

ಕ್ರಿ.ಶ.೧೬೯೨ರ ವೇಳೆಗೆ ಮರಾಠರ ಸಂತಾಜಿ ಘೋರ್ಪಡೆಯು ತನ್ನ ಅಪಾರ ದಂಡಿನೊಡನೆ ಕರ್ನಾಟಕದ ಮೇಲೆ ದಾಳಿ ನಡೆಸಿದನು. ಈ ವೇಳೆಗೆ ದಕ್ಷಿಣ ದಂಡಯಾತ್ರೆಯಲ್ಲಿ ತೊಡಗಿದ್ದ

ಔರಂಗಜೇಬನು ಶಿವಾಜಿಯ ಮಗ ಸಂಬಾಜಿಯನ್ನು ಕೊಂದ ಮೇಲೆ ರಾಜಾರಾಮನು ಮರಾಠರ ಮುಖಂಡನಾದನು. ಇವನೂ ಸಿಕ್ಕಿಬಿದ್ದರೆ ಶಿವಾಜಿಯ ವಂಶವೇ ನಶಿಸಿ ಹೋಗುತ್ತದೆಂದು ರಾಜಾರಾಮನನ್ನು ದಕ್ಷಿಣದ ಜಿಂಜಿ ಕೋಟೆಯಲ್ಲಿ ಸುರಕ್ಷಿತವಾಗಿಟ್ಟು, ಮಹಾರಾಷ್ಟ್ರ ಮತ್ತು ಕರ್ನಾಟಕಗಳಲ್ಲಿ ಔರಂಗಜೇಬನನ್ನು ಎದುರಿಸುವ ಜವಾಬ್ದಾರಿಯನ್ನು ಸಂತಾಜಿ ಘೋರ್ಪಡೆಗೆ ವಹಿಸಲಾಯಿತು. ಸಂತಾಜಿಯು ಶಿವಾಜಿಯ ಹಾಗೆ ಗನೀಮಿ (ಕೊಳ್ಳೆ ಹೊಡೆಯುವ) ಯುದ್ಧದಲ್ಲಿ ಪರಿಣಿತಿ ಪಡೆದಿದ್ದು, ಕೊಪ್ಪಳ ಇವನ ಜಾಗೀರು ಪ್ರದೇಶವಾಗಿದ್ದಿತು. ಈ ವೇಳೆಗೆ ಔರಂಗಜೇಬನು ಭೀಮಾ ತೀರದ ಬ್ರಹ್ಮಪುರಿಯಲ್ಲಿ ತಂಗಿದ್ದನು. ಒಂದು ಸಲ ಸಂತಾಜಿ ಮೊಗಲರ ರಾಜ್ಯದಿಂದ ಬಾರೀ ಲೂಟಿಯನ್ನು ಕೊಪ್ಪಳಕ್ಕೆ ಸಾಗಿಸುತ್ತಿದ್ದಾನೆನ್ನುವ ಸುದ್ದಿ ಔರಂಗಜೇಬನಿಗೆ ತಿಳಿಯಿತು. ಕೂಡಲೇ ಆತನು ತನ್ನ ಸಿರಾ ಪ್ರಾಂತ್ಯದ ಅಧಿಕಾರಿಯಾದ ಖಾಸಿಂಖಾನನಿಗೆ ಸಂತಾಜಿಯನ್ನು ತಡೆಯುವಂತೆ ಆಜ್ಞಾಪಿಸಿದನು.[೨೭] ಖಾಸಿಂಖಾನನು ೨೫,೦೦೦ ಸೈನಿಕರು ಮತ್ತು ಖಾನ್-ಜಾದ್-ಖಾನ್ ಎಂಬ ಇನ್ನೋರ್ವ ಸರದಾರನೊಡನೆ ಅತ್ಯುತ್ತಮ ಫಿರಂಗಿ ದಳದ ಸಮೇತ ಯುದ್ಧಕ್ಕೆ ಹೊರಟನು.[೨೮] ಈ ಬಾರೀ ಸೇನೆ ತನ್ನನ್ನು ಸೋಲಿಸಲು ಬರುತ್ತಿದೆ ಎಂದು ಸಂತಾಜಿಗೆ ತಿಳಿಯಿತು.

ಮೊಗಲರ ಮನೆತನದ ಖಾನ್-ಜಾದ್-ಖಾನನ ಜೊತೆ ಔರಂಗಜೇಬನ ನಿಕಟವರ್ತಿಗಳಾದ ಕೆಲವು ಸರದಾರರು ಬಂದಿದ್ದರು. ಇಂಥ ಅತಿಥಿಗಳನ್ನು ಯೋಗ್ಯ ರೀತಿಯಿಂದ ಸತ್ಕರಿಸುವ ಸಲುವಾಗಿ ಖಾಸಿಂಖಾನನು ಹಲವು ರೀತಿಯ ಸಿದ್ಧತೆಗಳನ್ನು ಮಾಡಿದನು. ಅದವಾನಿಯಲ್ಲಿದ್ದ ತನ್ನ ಕರ್ನಾಟಕ ಡೇರಾಗಳನ್ನು ಬಂಗಾರ, ಬೆಳ್ಳಿ ಚೈನಾ ಪಾತ್ರೆಗಳನ್ನು ಹೊರತೆಗೆದನು. ಈ ವೇಳೆಗೆ ಸಂತಾಜಿಯು ಇವರನ್ನು ಎದುರುಗೊಳ್ಳುವುದಕ್ಕೆ ಬೇರೆ ತರಹದ ವ್ಯವಸ್ಥಿತ ಸಿದ್ಧತೆಗಳನ್ನು ಮಾಡಿ, ತನ್ನ ಸೇನೆಯನ್ನು ಮೂರು ಭಾಗವಾಗಿ ವಿಂಗಡಿಸಿದನು. ಮೊದಲನೆಯದು ಮೊಗಲರ ಬಿಡಾರವನ್ನು ಲೂಟಿ ಮಾಡತಕ್ಕದ್ದು, ಎರಡನೆಯದು ಮೊಗಲರ ಸೇನೆಯ ಮೇಲೆ ಬೀಳತಕ್ಕದ್ದು, ಮೂರನೆಯದನ್ನು ಅವಶ್ಯವಿದ್ದಲ್ಲಿ ಕಳುಹಿಸುವುದಕ್ಕೆ ಕಾದಿದ್ದನು. ಚಿತ್ರದುರ್ಗ ಪಾಳೆಯಗಾರನು ಲೂಟಿಯ ಸಲುವಾಗಿ ಮರಾಠರನ್ನು ಸೇರಿಕೊಂಡನೆಂದು ಪರ್ಶಿಯನ್ ಆಧಾರಗಳು ಹೇಳುತ್ತವೆ. ಕೆಲವು ಆಧಾರಗಳು ಚಿತ್ರದುರ್ಗದ ಸೇನೆ ಖಾಸಿಂಖಾನನ ನೆರವಿಗೆ ಬರುವುದರೊಳಗಾಗಿ ಆಕ್ರಮಣ ನಡೆದಿತ್ತೆಂದು ತಿಳಿಸುತ್ತವೆ.

ಹೀಗೆ ಕದನವು ಬೆಳಿಗ್ಗೆ ಆರಂಭವಾಯಿತು. ಅದು ಆರಂಭವಾದಾಗ ಖಾನ್-ಜಾದ್-ಖಾನ್ ಎದ್ದಿರಲಿಲ್ಲ. ಈತನು ಎದ್ದ ಮೇಲೆ ಅವನಿಗೂ ಖಾಸಿಂಖಾನನಿಗೂ ಶತ್ರುಸೇನೆ ಅಪರಿಮಿತವಾಗಿದೆ ಮತ್ತು ಶಕ್ತಿಯುತವಾಗಿದೆಯೆಂದು ಅರಿವಾಯಿತು. ಮರಾಠರ ಸೇನೆಯಲ್ಲಿ ಕಾಳಾಪೇದೆಗಳೆಂದು ಹೆಸರಾದ ದಕ್ಷಿಣದ ಬೇಡರೂ ಸೇರಿದ್ದರು. ಇದರಿಂದ ಮೊಗಲರಿಗೆ ದಿಕ್ಕು ತೋಚದಂತಾಯಿತು. ಇಂಥ ಸಂದರ್ಭದಲ್ಲಿ ಸಂತಾಜಿಯ ಕಾದಿಟ್ಟ ಸೇನೆ ಯುದ್ಧರಂಗಕ್ಕೆ ಬಂದಿತು. ಹೀಗಾಗಿ ಖಾಸಿಂಖಾನನ ಬಿಡಾರವೆಲ್ಲಾ ಶತ್ರುವಶವಾಯಿತು. ಈ ಸುದ್ದಿ ತಿಳಿದು ಮೊಗಲ್ ಮುಖಂಡರು ಹೌಹಾರಿದರು. ಈ

ವೇಳೆಗೆ ಖಾಸಿಂಖಾನನಿಗೆ ಶರಣಾಗದ ಹೊರತು ಬೇರೆ ದಾರಿ ಕಾಣಲಿಲ್ಲ. "ಖಾನ್ ಸಾಹೇಬರೇ ವೃಥಾ ಏಕೆ ಹೋರಾಡಿ ಮಡಿಯುತ್ತೀರಿ, ನೀವು ಒಳ್ಳೆಯ ಮಾತಿಗೆ ನಿಮ್ಮ ಸಂಪತ್ತನ್ನು ಒಪ್ಪಿಸಿ ಸಿರಾಕ್ಕೆ ಹೊರಟು ಹೋಗಿರಿ. ನಿಮ್ಮ ಕೂದಲು ಕೊಂಕದಂತೆ ನಾವು ನೋಡಿಕೊಳ್ಳುತ್ತೇವೆ. ನೀವು ದುಡುಕಿ ಹೋರಾಡಿದರೆ ಸರ್ವನಾಶವಾಗುತ್ತೀರಿ"[೨೯] ಎಂದನು ಸಂತಾಜಿ ಘೋರ್ಪಡೆ. ಹೀಗೆ ಹೋರಾಟದಲ್ಲಿ ಅರ್ಥವಿಲ್ಲವೆಂದು ತಿಳಿದ ಮೊಗಲರು ಕೈಗೆ ಸಿಕ್ಕ ಸಾಮಾನುಗಳನ್ನು ತೆಗೆದುಕೊಂಡು ಎರಡು ಮೈಲಿ ದೂರದಲ್ಲಿದ್ದ ದೊಡ್ಡೇರಿ ಕೋಟೆಯ ಕಡೆಗೆ ಓಡಿ ಹೋಗಿ ಆ ಕೋಟೆಯನ್ನು ಹೊಕ್ಕರು. ಕೋಟೆಯಲ್ಲಿ ಆಹಾರ ಸ್ವಲ್ಪವಿದ್ದ ಕಾರಣ ಹಸಿವಿನಿಂದ ಮೊಗಲರು ಶರಣಾಗುತ್ತಾರೆ ಎನ್ನುವ ಮರಾಠರ ಎಣಿಕೆ ಮುಂದೆ ಸುಳ್ಳಾಗಲಿಲ್ಲ. ಮೊದಲನೆಯ ದಿನ ಕೋಟೆಯಲ್ಲಿದ್ದ ಆಹಾರವನ್ನು ಎಲ್ಲರೂ ಹಂಚಿಕೊಳ್ಳಲಾಗಿ ಆಹಾರ ಬರಿದಾಯಿತು. ದನಗಳು ಮನೆಗಳ ಚಪ್ಪರದ ಹುಲ್ಲನ್ನು ತಿನ್ನದೆ ಗತಿಯಿರಲಿಲ್ಲ. ಎರಡನೆಯ ದಿನ ಜನರಿಗಾಗಲಿ ದನ-ಕರುಗಳಿಗಾಗಲಿ ಆಹಾರವಿರಲಿಲ್ಲ. ದನಗಳು ಇತರ ದನಗಳ ಬಾಲಗಳನ್ನು ಸೊಪ್ಪೆಂದು ತಿನ್ನುವಷ್ಟರ ಮಟ್ಟಿಗೆ ಆಹಾರದ ಅಭಾವ ಇತ್ತೆಂದು ಪರ್ಶಿಯನ್ ಲೇಖಕ ಹೇಳಿದ್ದಾನೆ.

ಒಟ್ಟಾರೆ ಸಾಮಾನ್ಯ ಸೈನಿಕನಾದವನಿಗೆ ಬಳಿಯಲ್ಲಿದ್ದ ಕೆರೆಯ ನೀರಲ್ಲದೆ ಇನ್ನೇನೂ ಇರಲಿಲ್ಲ. ಇನ್ನೂ ಆನೆ ಕುದುರೆಗಳ ಪಾಡನ್ನು ಕೇಳುವವರಿಲ್ಲ. ಹೀಗೆ ಮೂರು ದಿನಗಳು ಕಳೆದು ಹೋದವು. ನಾಲ್ಕನೆಯ ದಿನವೆಂಬುದು ಮೊಗಲರ ಪಾಲಿಗೆ ದುರಂತದ ದಿನವೆನಿಸಿತು. ಇಂಥ ಸುದಿನವನ್ನು ತನ್ನ ಲಾಭಕ್ಕಾಗಿ ಬಳಸಿಕೊಂಡವನೆಂದರೆ ಬಿಚ್ಚುಗತ್ತಿ ಭರಮಣ್ಣನಾಯಕ. ಔರಂಗಜೇಬನ ಆಸ್ಥಾನ ಇತಿಹಾಸಕಾರ ಖಾಫಿಖಾನ್ ತನ್ನ 'ಮುಂತಖಾಬ್-ಉಲ್-ಲುಖಾಬ್–ಇ–ಮಹಮದ್–ಷಾಹಿ'ಯಲ್ಲಿ ಹೇಳುವಂತೆ 'ದೊಡ್ಡೇರಿ ಕಾಳಗ' ನಡೆದುದು ನಾಲ್ಕು ದಿನಗಳ ಕಾಲ ಎಂದರೆ, ಜೇಮ್ಸ್‌ಗ್ರಾಂಟ್ ಡಫ್ ಹೇಳುವಂತೆ "ಮೊಗಲರು ದೊಡ್ಡೇರಿ ಕೋಟೆಯನ್ನು ಹೊಕ್ಕಿದ್ದು ಮೂರನೆ ದಿನ" ಎಂದಿದ್ದಾರೆ.

ಭರಮಣ್ಣನಾಯಕನು ದುರ್ಗದ ಸೇನೆಯೊಡನೆ ಮೊಗಲರ ಮೇಲೆ ದಾಳಿ ನಡೆಸಿದನು. ಮಿರ್ಜಾ ಹಸನ್ ಮೊದಲಾದ ಮೊಗಲ್ ಸರದಾರರು ಈ ಕಾಳಗದಲ್ಲಿ ಕೊಲ್ಲಲ್ಪಟ್ಟರು. ಇಲ್ಲಿನ ಭಯಾನಕ ಸ್ಥಿತಿ ಎಷ್ಟಿತ್ತೆಂದರೆ, ಮಡಿದ ಯೋಧರ ಶರೀರಗಳನ್ನು ಯುದ್ಧಭೂಮಿಯಿಂದ ಎತ್ತಿಕೊಳ್ಳಲೂ ಸಹ ಮೊಗಲರು ಹಿಂಜರಿದರು. ಖಾಸಿಂಖಾನನಿಗಾದರೂ ಅಫೀಮು ಇಲ್ಲದಿದ್ದರೆ ಆಗುತ್ತಿರಲಿಲ್ಲ. ಮೂರು ದಿನ ಅಫೀಮು ಇಲ್ಲದಿದ್ದಕ್ಕೆ ನಾಲ್ಕನೆಯ ದಿನ ಸತ್ತನೆಂದು ವರದಿಗಳು ಹೇಳುತ್ತವೆ. ಇನ್ನೊಂದು ವರದಿಯ ಪ್ರಕಾರ 'ಮೊಗಲ್ ಚಕ್ರವರ್ತಿ ಔರಂಗಜೇಬನಿಗೆ ಮುಖ ತೋರಿಸಲು ಧೈರ್ಯ ಸಾಲದೆ ಆತ್ಮಹತ್ಯೆ ಮಾಡಿಕೊಂಡನೆಂಬ' ಅಭಿಪ್ರಾಯವು ವ್ಯಕ್ತಪಟ್ಟಿದೆ. ಹಸಿವಿನಿಂದ ಸಾಯುವುದಕ್ಕಿಂತ ಶರಣಾಗತನಾಗುವುದು ಲೇಸೆಂದು ಖಾನ್-ಜಾದ್-ಖಾನನು ತನ್ನ ದಕ್ಷಿಣ ದಿವಾನನ್ನು ಸಂತಾಜಿಯ ಕಡೆ ಸಂಧಾನಕ್ಕೆ ಕಳುಹಿಸಿದನು.

ಈ ದಿವಾನನು ಸಂತಾಜಿಯನ್ನು ಬೇಟಿಯಾದಾಗ ಒಂದು ಲಕ್ಷ ರೂ. ಮೌಲ್ಯದ ಹೊನ್ನು ಮತ್ತು ಆನೆ ಕುದುರೆಗಳನ್ನು ಕೊಟ್ಟರೆ ಮೊಗಲರನ್ನು ಬಿಡುವುದಾಗಿ ಹೇಳಿದನು. ನೀನು ಕೇಳುವ ಒಂದು ಲಕ್ಷ ಖಾನ್-ಜಾದ್-ಖಾನ್‌ನು ತನ್ನ ಒಬ್ಬನ ಬಿಡುಗಡೆಗಷ್ಟೆ. ಅವನ ಸೇನೆಯೆಲ್ಲಾ ಶರಣಾಗತಿಯಾಗುತ್ತಿರ ಬೇಕಾದರೆ ಇನ್ನು ಹೆಚ್ಚು ಹಣವನ್ನು ಕೇಳೆಂದು ದಿವಾನನೇ ಹೇಳಿಕೊಟ್ಟನು. ಕೊನೆಗೆ ಇಪ್ಪತ್ತು ಲಕ್ಷ ರೂ. ಮೌಲ್ಯದ ಹೊನ್ನು ಮತ್ತು ಒಡವೆ ವಸ್ತ್ರ ಇತರ ಸಾಮಾನುಗಳನ್ನು ಮೊಗಲರು ಬಿಟ್ಟುಕೊಡಬೇಕು ಎಂದನು. ಪ್ರತಿಯೊಬ್ಬ ಸೈನಿಕನು ತನ್ನ ಮೈಮೇಲಿನ ವಸ್ತ್ರ ಮತ್ತು ತನ್ನ ಕುದುರೆ ಇಷ್ಟನ್ನು ಮಾತ್ರ ತೆಗೆದುಕೊಂಡು ಹೋಗಬೇಕೆಂಬ ಕರಾರಿನ ಮೇಲೆ ಯುದ್ಧ ಕೊನೆಗೊಂಡಿತು.

ದೊಡ್ಡೇರಿಗೆ ಸಂತಾಜಿ ಘೋರ್ಪಡೆಯು ಧಾತು ಸಂವತ್ಸರದಲ್ಲಿ ೨೦,೦೦೦ ಕುದುರೆಯೊಡನೆ ಬಂದನು. ಸಿರಾದ ಸುಬೇದಾರ ಖಾಸಿಂಖಾನನು ತಳಕಿನಿಂದ ದೊಡ್ಡೇರಿ ತನಕ ಲಡಾಯಿ ಮಾಡುತ್ತಾ ಹೋಗಿ ದೊಡ್ಡೇರಿ ಕೋಟೆಯೊಳಗೆ ಅವಿತುಕೊಂಡನು. ದುರ್ಗದ ದೊರೆಯು ಕುಡುತಿನ ವೆಂಕಣ್ಣ, ಹೊಳಲ್ಕೆರೆ ಬೊಮ್ಮಣ್ಣ ಇವರಿಗೆ ಫೌಜುದಾರಿ ಮತ್ತು ಕುದುರೆ ಮಂದಿ ಸಹ ಕೊಟ್ಟು ಖಾಸಿಂಖಾನನ ಸಹಾಯಕ್ಕೆ ಕಳುಹಿಸಿದನು. ಆದರೆ ಈ ವೇಳೆಗಾಗಲೇ ಖಾಸಿಂಖಾನನು ಮೃತನಾದಿದ್ದನು. ಕೊನೆಗೆ ಕೋಟೆದುರ್ಗದವರ ವಶವಾಯಿತು[೬೦] ಎಂದು ಎಂ.ಎಸ್ .ಪುಟ್ಟಣ್ಣನವರು 'ಚಿತ್ರದುರ್ಗದ ಪಾಳೆಯಗಾರರು' ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ.

ಮರಾಠೀ ದಾಖಲೆಗಳು ಹೇಳುವಂತೆ ಭರಮಣ್ಣನಾಯಕ ತನ್ನ ಮಗ ಹಿರೇ ಮದಕರಿನಾಯಕನ ಸಹಿತ ಸಂತಾಜಿಯೊಡನೆ ಸೇರಿ ಮೊಗಲರ ವಿರುದ್ಧ ಹೋರಾಡಿದನು. ಚಿತ್ರದುರ್ಗದವರು ಮೊಗಲರ ಒತ್ತಡವನ್ನು ನಿವಾರಿಸಲೊಸುಗ ಮರಾಠರನ್ನು ಓಲೈಸಿದುದು ಸಹಜ. ಮೊಗಲರ ವಿರುದ್ಧ ಮರಾಠರೊಡನೆ ಸೇರಿ ಅಗತ್ಯ ಸೈನಿಕ ಸಹಾಯ ಒದಗಿಸಿದುದು ವಾಸ್ತವ. ಅಲ್ಲದೆ ೧೬೯೦ರ ಯುದ್ಧದಲ್ಲಿ ಖಾಸಿಂಖಾನನು ದುರ್ಗದವರ ಮೇಲೆ ನಡೆಸಿದ ದೌರ್ಜನ್ಯವು ಇದಕ್ಕಿದ್ದ ಇನ್ನೊಂದು ಕಾರಣ. ಒಟ್ಟಾರೆ ಹೋರಾಟದಲ್ಲಿ ಖಾಸಿಂಖಾನನು ಮೃತನಾದ ದೊಡ್ಡೇರಿಕೋಟೆ ದುರ್ಗದವರ ವಶವಾಯಿತು.[೬೧]

ಖಾಸಿಂಖಾನನು ದಕ್ಷ ಆಡಳಿತಗಾರನಾಗಿದ್ದು, ಸಿರಾವನ್ನು ಮೊಗಲರ ಒಂದು ಪ್ರಮುಖ ಕೇಂದ್ರ ಹಾಗೂ ಮಿಲಿಟರಿ ನೆಲೆಯನ್ನಾಗಿ ಪರಿವರ್ತಿಸಲು ಶ್ರಮಪಟ್ಟನು. 'ಫೌಜುದಾರಿ ದಿವಾನ್' ಎಂಬ ಬಿರುದು ಗಳಿಸಿದ್ದ ಅವನು ರಾಜ್ಯದಲ್ಲಿ 'ಮುಸಲ್ಮಾನ್ ರೆವಿನ್ಯೂ ಪದ್ಧತಿ'ಯನ್ನು ಜಾರಿಗೆ ತಂದು, ಜಾಮಿಯಾ ಮಸೀದಿಯನ್ನು ನಿರ್ಮಿಸಿದನು. ಹೀಗೆ ಖಾಸಿಂಖಾನನು ಮುಸ್ಲಿಮ್ ಬಾಂಧವನಾದರೂ ಕೂಡಾ ಹಿಂದೂಗಳಲ್ಲಿ ಪ್ರೀತಿ ವಿಶ್ವಾಸ ಕರುಣೆಯಿಂದ ಕಾಣುವ ಉದಾರ ಧಾರ್ಮಿಕ ಮನೋಭಾವನೆಯನ್ನು ಹೊಂದಿದ್ದನು. ಈತನು ಊರಿನ ಗೋಪಾಲಕೃಷ್ಣಸ್ವಾಮಿಗೆ ವರ್ಷಂಪ್ರತಿ ಶಾಶ್ವತ ಸೇವೆ ನಡೆಸುವಂತೆ ದತ್ತಿ ಹಾಕಿಕೊಟ್ಟನು. ಇದರಿಂದ ಈತನು ಅನ್ಯಧರ್ಮಗಳ ಸಹಿಷ್ಣುತಾ ಮನೋಭಾವನೆಯನ್ನು ಹೊಂದಿದ್ದನು ಎಂಬುದು ತಿಳಿದುಬರುತ್ತದೆ.

## ೩.೪. ಜುಲ್ಫಿಕರ್‌ಖಾನ್(ಕ್ರಿ.ಶ.೧೬೯೮-೧೭೦೦)

ಖಾಸಿಂಖಾನನ ಮರಣಾನಂತರ ಜುಲ್ಫಿಕರ್ ಖಾನನು ಸಿರಾದ ನವಾಬನಾದನು. ಈತನು ಮೊಗಲರಿಗೆ ಸೇರಿದ್ದ ದಕ್ಷಿಣ ಪ್ರದೇಶಗಳ ಮೇಲೆ ಅಧಿಕಾರ ಸ್ಥಾಪಿಸಿದನು. ಕರ್ನಾಟಕ-ಬಿಜಾಪುರ-ಬಾಲ್ಘಾಟ್ ಪ್ರದೇಶದಲ್ಲಿ ಮೊಗಲರ ಪ್ರಾಬಲ್ಯವನ್ನು ಎತ್ತಿ ಹಿಡಿಯುವುದು ಈತನ ಮುಖ್ಯ ಉದ್ದೇಶವಾಗಿತ್ತು.

ಜುಲ್ಫಿಕರ್‌ಖಾನನು ದಿಲ್ಲಿಯ ಬಾದಷಹನ ಆದೇಶದ ಮೇರೆಗೆ ಹಸದ್ ಖಾನರ ಕೋಮಾರರೊಡಗೂಡಿ ಫವುಜು ಸಮೇತ ಕರ್ನಾಟಕ ಸಂಸ್ಥಾನದ ಬಂದೋಬಸ್ತು ಮಾಡಲು ಬಂದನು. ಇವರ ಅಪ್ಪಣೆಯ ಮೇರೆಗೆ ಜುಲ್ಫಿಕರ್‌ಖಾನನು ಈ ರಾಜ್ಯಕ್ಕೆ ಬಂದು ಕ್ಷೀರನದಿ ತೀರದ ಷಡಾರಣ್ಯವೆಂಬ ಅಡವಿಯಲ್ಲಿ ಇಳಿದುಕೊಂಡು, ಸುತ್ತೂ ಜನ ಪಾಳೆಯಗಾರರು ಮುಂತಾದವರನ್ನೆಲ್ಲಾ ಕರೆಸಿಕೊಂಡು ಮಸಲತ್ತು ಮಾಡಿ ತಾವು ಇಳಿದಿದ್ದ ಅರಣ್ಯದಲ್ಲಿ ಒಂದು ಊರು ಕಟ್ಟಿಸಿ ಆದಕ್ಕೆ ಆರು ಕಾಡುಯೆಂಬುದಾಗಿ ಹೆಸರಿಟ್ಟು ಅದು ಒಂದು ಸುಬೆ ಮೊಕರುಮಾಡಿ, ಆ ಸುಬೇದ ನವಾಬಗಿರಿ ತಮ್ಮ ಸಂಗಡ ಬಂದಿದ್ದ ಸರದಾರರ ಪೈಕಿ ದಾವೂದ್ ಖಾನ್‌ರೆಂಬುವರಿಗೆ ಮೊಕರು ಮಾಡಿಸಿ, ಅವರ ಸಮೀಪದಲ್ಲಿ ಮೊಖ್ತಿಯಾರಿ ದಿವಾನ್‌ಗಿರಿ ಸಾದತ್-ಉಲ್ಲಾ-ಖಾನರಿಗೆ ಮೊಕರು ಮಾಡಿಸಿ, ಅವರ ಕೈಕೆಳಗೆ ಹನ್ನೆರಡು ಸಾವಿರ ಕುದುರೆ, ಹತ್ತು ಸಾವಿರ ಬಾರು, ಇಪ್ಪತ್ತು ಸಾವಿರ ಅಹಷಾಂ ಕರ್ನಾಟಕ ಮುಂತಾಗಿ ಐವತ್ತು ಸಾವಿರ ಫೌಜು ಇಡುವಂತೆ ಮೊಕರು ಮಾಡಿಸಿ, ಅವರ ಹುಕ್ಕುಮಿನಲ್ಲಿ ಶ್ರೀರಂಗಪಟ್ಟಣ, ಸಾತಗಡ, ಘಾಟಗಳಿಂದ ಹಿಂದೂಪೂರ್ವಸಮುದ್ರ ತೀರದ ಪರ್ಯಾಂತರ ಇರುವ ದ್ರಾವಿಡ ರಾಜ್ಯ ಕಾಳಹಸ್ತಿ, ದಾಮೆರ್ಲ, ವಲಗೋಟಿ, ತಿರುಚನಾಪಲ್ಲಿ, ಮಧುರೆ ತಂಜಾವೂರು, ನೆಲ್ಲೂರು, ಸರ್ವಾಪಲ್ಲಿ ಮಛಲಿ ಬಂದರ್, ಚಿತ್ತೂರು ಮುಂತಾದ ಪಾಳೆಯಗಾರರು ಪಗದಿಕೊಟ್ಟುಕೊಂಡು, ಸುಬೇ ನವಾಬರ ತಾಬೇದಾರಿಯೊಳಗೆ ಹಾಜರಿರುವಂತೆಯೂ ಮೊಕರರು ಮಾಡಿಸಿ ಈ ಬಗ್ಗೆಲ್ಲಾ ದಿಲ್ಲಿಯಿಂದ ಸನ್ನದು ಖಿಲ್ಲತ್ತು ಮುಂತಾದ್ದು ತರಿಸಿಕೊಟ್ಟು ಕೃಷ್ಣಾನದಿಯಿಂದ ಶ್ರೀರಂಗಪಟ್ಟ ಘಾಟ ಪರ್ಯಂತರ ಇರುವ ರಾಜ್ಯವೆಲ್ಲ ಶೀರ‍್ಯ ವಂದು ಸುಭೆ ಮೊಕರು ಮಾಡಿ ಅಲ್ಲಿ ಒಬ್ಬ ನವಾಬರನ್ನು ಯಿಟ್ಟು ಪೆನುಗೊಂಡೆ ಸಹ ಕರ್ನಾಟಕದ ದೇಶ ಶೀರ‍್ಯದ ಸುಭೇಕ್ಕೆ ದಾಖಲು ಮಾಡಿಸಿ ಸದರಿ ಮೂರು ಸುಭೆ ನವಾಬರೂ ಬಿಜಾಪುರ (ಮಹಾರಾಷ್ಟ್ರರಾಜ್ಯ) ಬಿದರೆ(ಹಿಂದೂರಾಜ್ಯ), ಅಹಮದ್ ನಗರ(ಗುಜ್ಜರ ರಾಜ್ಯ) ಮುಂತಾದ ಚಿಲ್ಲರೆ ನವಾಬರು ಸಹ ಯಾವತ್ತು ಜನವೂ ದಿಲ್ಲಿಗೆ ದಕ್ಷಿಣ ದೇಶದ ವಜೀರನಾದ ಹೈದರಾಬಾದು ಅಸಫ್ ಜಹಾನರ ತಾಬೇ ತಾರೀಲಿ ಇರುವಂತೆ ಮೊಕರರು ಮಾಡಿಸಿ ಜುಲ್ಫಿಕರ್‌ಖಾನರು ಫವುಜು ಸಹ ದಿಲ್ಲಿಗೆ ಹೊರಟು ಹೋದರು.[೨೨] ಎಂದು ಎಂ.ಎಂ.ಕಲಬುರ್ಗಿಯವರ 'ಕರ್ನಾಟಕದ ಕೈಫಿಯತ್ತು'ಗಳಲ್ಲಿ ಉಲ್ಲೇಖಿಸಲಾಗಿದೆ.

ದೊಡ್ಡೇರಿ ಮತ್ತು ಬಸವಾಪಟ್ಟಣಗಳಲ್ಲಿ ಎರಡು ವಿಕ್ರಮಗಳನ್ನು ಸಾಧಿಸಿದ ಸಂತಾಜಿ ಘೋರ್ಪಡೆ ಕರ್ನಾಟಕದಲ್ಲಿ ಹೆಚ್ಚಿನ ಪ್ರದೇಶಗಳನ್ನು ಆಕ್ರಮಿಸಲು ಒಂದು ಯೋಜನೆಯನ್ನು ಸಿದ್ಧಗೊಳಿಸಿದನು. ಮೊಗಲರ ದಂಡಯಾತ್ರೆಯನ್ನು ತಡೆಗಟ್ಟುವ ಗುರಿಯನ್ನು ಇಟ್ಟುಕೊಂಡು ಸಂತಾಜಿ ಸಿರಾದ ಬಳಿ

ಮೊಗಲ್ ಠಾಣ್ಯವನ್ನು ಹಾಕಿದನು. ಜುಲ್ಫಿಕರ್‌ಖಾನನು ಅರಮ್ ತುರಾನ ಮಗನಾದ ದೀದರ್ ಬಕ್ಷ್‌ನ ನೇತೃತ್ವದಲ್ಲಿ ಮೊಗಲ ಸೈನ್ಯವನ್ನು ಮುನ್ನೆಡೆಸಿದನು. ಸಂತಾಜಿ ಘೋರ್ಪಡೆ ೧೫,೦೦೦ ಸೇನಾ ಪಡೆಯೊಂದಿಗೆ ಸಿರಾದ ಬಳಿ ಕಾದು ಕುಳಿತಿದ್ದನು. ಅವನು ಕರ್ನಾಟಕದೊಳಗೆ ಹೋಗದಂತೆ ತಡೆಗಟ್ಟುವುದು ಜುಲ್ಫಿಕರ್‌ಖಾನ್‌ನ ಉದ್ದೇಶವಾಗಿತ್ತು. ಔರಂಗಜೇಬನು ಜುಲ್ಫಿಕರ್‌ಖಾನನಿಗೆ ಆದೇಶವೊಂದನ್ನಿತ್ತು, ಮೈಸೂರು ರಾಜ್ಯಕ್ಕೆ ನುಗ್ಗಿರುವ ಸಂತಾಜಿಯನ್ನು ಬೆನ್ನಟ್ಟಬೇಕೆಂದು ಸೂಚಿಸಿದನು. ಇದರಿಂದ ಮೈಸೂರು ರಾಜ್ಯಕ್ಕೆ ಮರಾಠರನ್ನು ಬೆನ್ನಟ್ಟಿಕೊಂಡು ಜುಲ್ಫಿಕರ್‌ಖಾನ್ ಹೋದನು. ಆದರೆ ಈ ವೇಳೆಗೆ ಚಿಕ್ಕದೇವರಾಜ ಪರಾಭವಗೊಂಡು ಸಂತಾಜಿ ಮೈಸೂರು ರಾಜ್ಯದಿಂದ ಕಾಲ್ಕಿತ್ತಿದ್ದುದರಿಂದ ಜುಲ್ಫಿಕರ್‌ಖಾನನಿಗೆ ನಿರಾಶೆಯಾಯಿತು ಎಂದು ವಿಲ್ಕ್ಸ್‌ರವರು ತಿಳಿಸುತ್ತಾರೆ.

ಮತ್ತೊಂದು ವರದಿಯ ಪ್ರಕಾರ ಮೊಗಲ್ ಸೇನಾಧಿಕಾರಿ ಜುಲ್ಫಿಕರ್ ಖಾನನು ಮೈಸೂರಿಗೆ ಹೋಗುವ ಮಾರ್ಗದಲ್ಲಿ ತುರಿಯೂರು ಪಾಳೆಯಗಾರನಿಂದ ಒಂದು ಕರೆ ಬಂದಿತು. ಈತನು ತನ್ನ ರಾಜ್ಯದಿಂದ ಮೈಸೂರಿನವರನ್ನು ಓಡಿಸಿ ತನ್ನ ರಾಜ್ಯವನ್ನು ರಕ್ಷಿಸಿಕೊಡಬೇಕೆಂಬ ಮನಕರಗಿಸುವಂತಹ ಮನವಿಯನ್ನು ಮಾಡಿದನು. ಇದರಿಂದ ಜುಲ್ಫಿಕರ್‌ಖಾನನು ಕೂಡಲೇ ಒಂದು ಸೇನಾ ತುಕಡಿಯನ್ನು ಸಲೀಂಖಾನ್ ಮತ್ತು ಇಬ್ರಾಹಿಂಖಾನರ ನೇತೃತ್ವದಲ್ಲಿ ಏರ್ಪಡಿಸಿ ನಂತರ ಸೇನಾಧಿಕಾರಿಗಳನ್ನು ಅವರ ಜೊತೆಯಲ್ಲಿ ಹೋಗುವಂತೆ ಆಜ್ಞೆ ಮಾಡಿದನು. ಇದರಿಂದ ಮೈಸೂರು ದಂಡಯಾತ್ರೆ ಸ್ಥಗಿತವಾಯಿತು.

ಜಾದೂನಾಥ್ ಸರ್ಕಾರ್ ಅವರು ಪಾರ್ಸಿ ಗ್ರಂಥಾಧಾರಗಳಿಂದ ಜುಲ್ಫಿಕರ್‌ಖಾನನು ಸಂತಾಜಿಯನ್ನು ಮೈಸೂರಿನವರೆಗೂ ಹಿಂಬಾಲಿಸಿ ಬಂದನೆಂದು ಸ್ಪಷ್ಟಪಡಿಸುತ್ತಾರೆ. ಆದ್ದರಿಂದ ಕ್ರಿ.ಶ.೧೬೯೬ರಲ್ಲಿ ಸಂತಾಜಿ ಮೈಸೂರು ಆಕ್ರಮಣವನ್ನು ಮಾಡಿದನೆಂದು ಖಚಿತವಾಗಿ ಹೇಳಬಹುದು.

### ೩.೪.೧. ಜಿಂಜಿಯ ಆಕ್ರಮಣ(ಕ್ರಿ.ಶ.೧೬೯೮)

ಔರಂಗಜೇಬನು ಜುಲ್ಫಿಕರ್‌ಖಾನನಿಗೆ ಒಂದು ಕಾಗದ ಬರೆದು ಜಿಂಜಿ ಕೋಟೆಯನ್ನು ಕೂಡಲೇ ಆಕ್ರಮಿಸಬೇಕೆಂದು ಆಜ್ಞೆ ಇತ್ತನು. ಜುಲ್ಫಿಕರ್‌ಖಾನನು ನಿಷ್ಠೆಯಿಂದಲೂ, ಶಿಸ್ತಿನಿಂದಲೂ ಕೋಟೆಯ ಮೇಲೆ ದಾಳಿ ಮಾಡಿ ಕ್ರಿ.ಶ.೧೬೯೮ನೇ ಜನವರಿ ೩೦ರಂದು ಅದನ್ನು ಆಕ್ರಮಿಸಿಕೊಂಡನು. ಅಷ್ಟರಲ್ಲಿ ಅಲ್ಲಿದ್ದ ರಾಜಾರಾಮನು ತನ್ನ ಪರಿವಾರದೊಡನೆ ಆ ಕೋಟೆಯಿಂದ ತಪ್ಪಿಸಿಕೊಂಡು ಹೋಗಿ ವೆಲ್ಲೂರು ಕೋಟೆಯಲ್ಲಿ ಅವಿತುಕೊಂಡನು.[೩೩]

### ೩.೪.೨. ರಾಯಗಢ ಆಕ್ರಮಣ

ಮರಾಠರ ರಾಜಾರಾಮನು ತನ್ನ ಅನುಯಾಯಿಗಳೊಂದಿಗೆ ರಾಯಗಢವನ್ನು ಬಿಟ್ಟು ಬಂದು ಪ್ರತಾಪಗಡವನ್ನು ಸೇರಿದನು. ಎಂಟು ತಿಂಗಳ ಕಾಲ ಘೋರಯುದ್ಧ ನಡೆದ ನಂತರ ಜುಲ್ಫಿಕರ್‌ಖಾನ್ ಎಂಬ ಮೊಗಲ್ ಸೇನಾಧಿಪತಿ ರಾಯಗಢವನ್ನು ನೆಲಸಮ ಮಾಡಿ ಯಶುಬಾಯಿ ಮತ್ತು

ಶಿವಾಜಿಯರೊಡಗೂಡಿ ಅನೇಕ ಮಂದಿ ಮರಾಠರನ್ನು ಬಂಧಿಸಿದನು. ಅಷ್ಟಕ್ಕೆ ತೃಪ್ತನಾಗದ ಜುಲ್ಫಿಕರ್ ಖಾನ್ ರಾಜರಾಮನನ್ನೇ ಹಿಂಬಾಲಿಸಿಕೊಂಡು ಬಂದು ಪ್ರತಾಪಗಡಕ್ಕೆ ಮುತ್ತಿಗೆ ಹಾಕಿದನು. ಕೊನೆಗೆ ರಾಜಾರಾಮನು ದಕ್ಷಿಣಾಭಿಮುಖವಾಗಿ ಹೊರಟು ಸಂಕಷ್ಟದ ಪರಿಸ್ಥಿತಿಯನ್ನು ಎದುರಿಸುತ್ತಾ ಬಂದನು. ನಂತರ ಬಿದನೂರು ಮತ್ತು ಬೆಂಗಳೂರು ಪ್ರದೇಶಗಳಲ್ಲಿ ಮೊಗಲರ ಕಣ್ಣಿನಿಂದ ತಪ್ಪಿಸಿಕೊಂಡು ವೆಲ್ಲೂರಿಗೆ ಹೋಗಿ ಅಲ್ಲಿಂದ ವೇಷ ಮರೆಸಿಕೊಂಡು ಜಿಂಜಿಗೆ ಬಂದು ತಲುಪಿದನು.

ಸಿರಾದದ ನವಾಬನಾದ ಜುಲ್ಫಿಕರ್‌ಖಾನನು ಚಿತ್ರದುರ್ಗದ ಪಾಳೆಯಗಾರರೊಂದಿಗೆ ಸ್ನೇಹಪೂರ್ವಕ ಸಂಬಂಧ ಹೊಂದಿದ್ದನು. ಜುಲ್ಫಿಕರ್‌ಖಾನನು ಖಾಸಿಂಖಾನನ ಆಳ್ವಿಕೆಯ ಕಾಲದಲ್ಲಿ ಚಿತ್ರದುರ್ಗಕ್ಕೆ ವಕೀಲನಾಗಿ ಹೋಗಿದ್ದನು. ದುರ್ಗದ ಪರಶುರಾಮಪ್ಪನಾಯಕರು ಜುಲ್ಫಿಕರ್‌ಖಾನನನ್ನು ಸ್ವಾಗತಿಸಿದರು. ಆಗ ಜುಲ್ಫಿಕರ್‌ಖಾನನು ಭದ್ರಾಸನದ ಬಳಿ ಕುಳಿತು "ಇದು ನಾವು ಬಿಜಾಪುರವನ್ನು ಸೋಲಿಸಿದಾಗ ದೊರೆತ ಆಭರಣ ತಮಗಾಗಿ ದಿವಾನರು ಕಳುಹಿಸಿದ್ದಾರೆ ಸ್ವೀಕರಿಸಬೇಕು" ಎಂದನು. ದುರ್ಗದ ನಾಯಕರು ಅದನ್ನು ನೋಡಿದಾಗ ಅದರಲ್ಲಿದ್ದುದು ಡಮಾಸ್ಕಸ್‌ನಲ್ಲಿ ತಯಾರಾದ ವಿಶೇಷ ಶಕ್ತಿಯ "ಉಕ್ಕಿನ ಖಡ್ಗ" ಇದರಿಂದ ನಾಯಕರ ಮುಖ ಕೆಂಪಾಯಿತು. ನಂತರ ಜುಲ್ಫಿಕರ್‌ಖಾನ್ ದೆಹಲಿಯಿಂದ ಬಂದ ಪರ್ಶಿಯನ್ ಭಾಷೆಯ ಪತ್ರವನ್ನು ನಾಯಕರಿಗೆ ನೀಡಿದನು. ಇದರಲ್ಲಿ "ಚಿತ್ರದುರ್ಗ ಸಂಸ್ಥಾನದಿಂದ ಬರಬೇಕಾಗಿದ್ದ ಕಪ್ಪಕಾಣಿಕೆ ಬಹಳ ವರ್ಷಗಳಿಂದ ಬಾಕಿಯಾಗಿ ನಿಂತಿದೆ. ಇದರಿಂದ ಅಲಂಗೀರ್ ಬಾದಷಹನ ಮನಸ್ಸು ಪ್ರಕ್ಷುಬ್ಧವಾಗಿದೆ. ಆದ್ದರಿಂದ ಆದಷ್ಟು ಬೇಗ ಕಪ್ಪ-ಕಾಣಿಕೆಯ ಬಾಕಿಯನ್ನು ತೀರಿಸಿ, ಸೇನೆಗೆ ಕಳುಹಿಸಬೇಕಾದ ಆನೆ, ಕುದುರೆ, ಹುಲ್ಲು ಹುರುಳಿ ಮೊದಲಾದ ಸಾಮಗ್ರಿಗಳನ್ನು ಕಳಿಸಿಕೊಟ್ಟು ಸ್ನೇಹವನ್ನು ಕಾಪಾಡಿಕೊಳ್ಳುವುದು" ಎಂದು ಬರೆಯಲಾಗಿತ್ತು. ಇದರಿಂದ ಪರಶುರಾಮಪ್ಪನಾಯಕರು ಸಿಟ್ಟಿಗೆದ್ದು, ಯುದ್ಧಕ್ಕೆ ಸಿದ್ಧರಾದರು. ಇದಕ್ಕೆ ಕಾರಣ ತುಂಗಭದ್ರಾ ನದಿಯ ದಕ್ಷಿಣಭಾಗದ ಸಪ್ತಪರಗಣಗಳ ಮೇಲೆ ಅಧಿಪತಿಯಾಗಿ ನೇಮಿಸಲ್ಪಟ್ಟ ಖಾಸಿಂಖಾನನು ಚಿತ್ರದುರ್ಗದ ಪಾಳೆಯಗಾರರ ಮೇಲೆ ಮೊಗಲ್ ಪ್ರಭುತ್ವ ಸ್ಥಾಪಿಸುವ ಉದ್ದೇಶದಿಂದ ಕಳಿಸಿದ ನಿಯೋಗವೇ ಆಗಿತ್ತು. ದುರ್ಗದವರ ಶಕ್ತಿ ಸಾಮರ್ಥ್ಯ ಅರಿತಿದ್ದ ಖಾಸಿಂಖಾನನು ಅವರನ್ನು ಜಯಿಸಲು ಸಾಧ್ಯವಾಗದೆ ಹೋದಾಗ ಮೆಹರ್ ಬಾನಳನ್ನು (ನೃತ್ಯಗಾರ್ತಿ) ಚಿತ್ರದುರ್ಗದ ನಾಯಕರ ಆಸ್ಥಾನಕ್ಕೆ ಕಳುಹಿಸಿ ಅವರೊಂದಿಗೆ ಸಾಮರಸ್ಯ ಬೆಳೆಸಿಕೊಳ್ಳುವ ಉದ್ದೇಶ ಖಾಸಿಂಖಾನನಲ್ಲಿತ್ತು. ಮುಂದೆ ಚಿತ್ರದುರ್ಗದವರೊಂದಿಗೆ ಸ್ನೇಹದಿಂದ ಇದ್ದ ಜುಲ್ಫಿಕರ್‌ಖಾನನು ದೊಡ್ಡೇರಿಯ ಕಾಳಗದ ಸಂದರ್ಭದಲ್ಲಿ ಅವರ ಸಹಾಯವನ್ನು ಯಾಚಿಸಿದನು. ಆದರೆ ದುರ್ಗದವರು ಸಹಾಯ ಮಾಡಲು ಚಳ್ಳಕೆರೆಯವರೆಗೂ ಬಂದರು. ಆದರೆ ಆ ವೇಳೆಗೆ ಮರಾಠರ ಸಂತಾಜಿ ಸಿರಾದವರ ಮೇಲೆ ಆಕ್ರಮಣ ನಡೆಸಿದ್ದನೆಂದು ತ.ರಾ.ಸುಬ್ಬರಾವ್ 'ವಿಜಯೋತ್ಸವ' ಎಂಬ ಕಾದಂಬರಿಯಲ್ಲಿ ಉಲ್ಲೇಖಿಸಿದ್ದಾರೆ.[೩೪]

ಕರ್ನಾಟಕ-ಬಿಜಾಪುರ-ಬಾಲ್ಗಾಟ್ ಪ್ರದೇಶದಲ್ಲಿ ಮೊಗಲರ ಪ್ರಾಬಲ್ಯವನ್ನು ಎತ್ತಿ ಹಿಡಿಯುವುದು ಜುಲ್ಫಿಕರ್ ಖಾನನ ಉದ್ದೇಶವಾಗಿತ್ತು. ಜೊತೆಗೆ ಮೊಗಲರ ಸ್ನೇಹ ಬಯಸಿ ಕಪ್ಪಕಾಣಿಕೆ ನೀಡಲು ಬಂದ ಪಾಳೆಯಗಾರರಿಂದ ಕಪ್ಪಕಾಣಿಕೆ ವಸೂಲಿ ಮಾಡುವ ಗುರುತರ ಜವಾಬ್ದಾರಿ ಈತನ ಮೇಲಿತ್ತು. ವ್ಯಾಪಾರಕ್ಕಾಗಿ ಸೌಲಭ್ಯಗಳನ್ನು ಯಾಚಿಸಲು ಬಂದಿದ್ದ ಐರೋಪ್ಯರಿಂದ ಹಣ ವಸೂಲಿ ಮಾಡುವ ಕೆಲಸವೂ ಇವನದಾಗಿತ್ತು. ಇಷ್ಟೆಲ್ಲಾ ಅಧಿಕ ಕೆಲಸಗಳು ಇದ್ದುದರಿಂದ ಅವನು ತನ್ನ ಸಹಾಯಕ್ಕೆ 'ರುಸ್ತುಂಜಂಗ್' ಎಂಬುವನನ್ನು ನೇಮಕ ಮಾಡಿಕೊಂಡನು.

ಜುಲ್ಫಿಕರ್‌ಖಾನನು ಆರ್ಕಾಟಿಗೆ ತೆರಳಿದ ನಂತರ 'ರುಸ್ತುಂಜಂಗ್'ನು ಪಾಳೆಯಗಾರರು ದೇಸಾಯಿಗಳನ್ನು ವಿರೋಧ ಮಾಡಿಕೊಳ್ಳದೆ ಉಪಾಯದಿಂದ ಮೊಗಲರಿಗೆ ನೀಡಬೇಕಾಗಿದ್ದ ಹಣವನ್ನು ಅವರಿಂದ ವಸೂಲಿ ಮಾಡಿ ಸಿರಾದ ಖಜಾನೆಯನ್ನು ಭರ್ತಿ ಮಾಡಿದನು. ಇದರಿಂದ ಸಂತೋಷಗೊಂಡ ಔರಂಗಜೇಬನು ಅವನಿಗೆ 'ಬಹದ್ದೂರ್' ಎಂಬ ಬಿರುದನ್ನು, 'ಕೈಫಿಯತ್ ಖಾನ್' ಎಂಬ ಗೌರವಯುತವಾದ ಹೆಸರನ್ನು ನೀಡಿ ಸನ್ಮಾನಿಸಿದನು. ಜೊತೆಗೆ ಸಿರಾದ ಬಳಿಯಲ್ಲಿಯೇ ಮತ್ತೊಂದು ಪೇಟೆಯನ್ನು ನಿರ್ಮಿಸಿ 'ರುಸ್ತುಂಬಾದ್' ಎಂದು ಕರೆದನು. ಪ್ರತಿವರ್ಷವು ರಾಜ್ಯದ ಲೆಕ್ಕ ಪತ್ರಗಳನ್ನು ದಾಖಲೆಗಳ ಸಮೇತ ಚಕ್ರವರ್ತಿಯ ಆಸ್ಥಾನಕ್ಕೆ ಈತನು ಕಳುಹಿಸುತ್ತಿದ್ದನು.

## ೩.೫. ಫಡದುಲ್ಲಾಖಾನ್(ಕ್ರಿ.ಶ.೧೭೦೬)



ಮೊಗಲ್ ಚಕ್ರವರ್ತಿ ಔರಂಗಜೇಬನ ಕೊನೆಯ ಕಾಲದಲ್ಲಿ ಇವರ ಸ್ಥಾನಮಾನಗಳು ಕುಗ್ಗ ತೊಡಗಿದವು. ಆ ವೇಳೆಗಾಗಲೇ ಮೈಸೂರು ಸಂಸ್ಥಾನ ಪ್ರಬುದ್ಧಮಾನಕ್ಕೆ ಬಂದಿತ್ತು. ಖಾಸಿಂಖಾನನ ಮರಣಾನಂತರ ಚಿಕ್ಕದೇವರಾಜ ಒಡೆಯರು ಕರಣಿಕ ಲಿಂಗಪ್ಪಯ್ಯನ ರಾಯಭಾರತ್ವದಲ್ಲಿ ಔರಂಗಜೇಬನೊಂದಿಗೆ ಸ್ನೇಹ ಸಂಪಾದನೆ ಮಾಡಿದನು.[೩೫] ಆದರೆ ನಂತರದ ದಿನಮಾನಗಳಲ್ಲಿ ಮೊಗಲರ ದುರ್ಬಲ ಸ್ಥಿತಿಗಳನ್ನು ಉಪಯೋಗಿಸಿಕೊಂಡ ಮೈಸೂರಿನ ಚಿಕ್ಕದೇವರಾಜ ಒಡೆಯರು ಸಿರಾದ ಮೇಲೆ ಆಕ್ರಮಣ ಮಾಡಿ ಮೊಗಲ್ ಸರ್ಕಾರಕ್ಕೆ ಸಲ್ಲಿಸಬೇಕೆಂದು ಇಟ್ಟುಕೊಂಡಿದ್ದ ಹಣವನ್ನು ಲೂಟಿ ಮಾಡಿದನು. ಈ ವೇಳೆಗೆ ದಕ್ಷಿಣ ಭಾರತದಲ್ಲಿ ಮರಾಠರ ಹಿತಾಸಕ್ತಿಯ ಹೊಣೆ ಹೊತ್ತಿದ್ದ ಹರಜಿ ಮರಣ ಹೊಂದಲಾಗಿ ಚಿಕ್ಕದೇವರಾಜ ಮೈಸೂರಿನ ಗಡಿಯನ್ನು ಕರ್ನಾಟಕದಲ್ಲಿ ಮೊಗಲರ ಕೇಂದ್ರವಾಗಿದ್ದ ಸಿರಾದವರೆಗೂ ವಿಸ್ತರಿಸಲು ಸುಲಭವಾಯಿತು.



ಈ ವೇಳೆಗೆ ಫಡದುಲ್ಲಾಖಾನನು ನೆರೆಹೊರೆಯ ಪಾಳೆಯಪಟ್ಟುಗಳೊಂದಿಗೆ ಉತ್ತಮ ಸ್ನೇಹವನ್ನಿಟ್ಟು ಕೊಂಡಿದ್ದು, ಚಿತ್ರದುರ್ಗದೊಂದಿಗೆ ವಿಶೇಷ ಬಾಂಧವ್ಯವನ್ನು ಹೊಂದಿದ್ದನು. ಚಿತ್ರದುರ್ಗದ ಭರಮಪ್ಪ ನಾಯಕನು ಹಾವನೂರು, ಗುಡೇಕೋಟೆ, ನಿಡಗಲ್ಲು, ಪಾಳೆಯಗಾರರೊಂದಿಗೆ ರಾಯದುರ್ಗದ ಹಟ್ಟಿಕೋಟೆ ಯನ್ನು ಮುತ್ತಿದನು. ಸಿರಾದ ಫಡದುಲ್ಲಾಖಾನನು ತನ್ನ ಫೌಜುಸಮೇತ ದುರ್ಗದ ಸಹಾಯಕ್ಕೆ

ಹೋದನು. ಹೀಗೆ ಎರಡು ಸೇನೆಗಳು ಶತ್ರುಗಳ ಬೆನ್ನಗದಮಿಕೊಂಡು ಹೋಗಲಾಗಿ, ಹಗೆಗಳು ಮುತ್ತಿಗೆ ಬಿಟ್ಟು ಓಡಿದರು. ಆದರೆ ದುರ್ಗದ ದಂಡು ಶತ್ರುಗಳ ಬೆನ್ನತ್ತಿ ಹೋಯಿತು.

ಸರ್ವಜಿತು ಸಂವತ್ಸರದಲ್ಲಿ ಮತ್ತೆ ರಾಯದುರ್ಗದವರು ಚಿತ್ರದುರ್ಗದ ಮೇಲೆ ದಂಡೆತ್ತಿ ಬರಲಾಗಿ ಭರಮಪ್ಪನಾಯಕನು ಧನೋಜಿಗೆ ಹಣಕೊಟ್ಟು ಸಂಧಾನ ಮಾಡಿಕೊಂಡನು. ಇದೇ ಸಂವತ್ಸರದ ಮಾರ್ಗಶಿರ ಮಾಸದಿಂದ ಸರ್ವಧಾರಿ ಸಂ|ದ ಜೇಷ್ಟದವರೆಗೆ ಸಿರಾದ ಸುಬೇದಾರ ಫಡದುಲ್ಲಾಖಾನನು ದುರ್ಗದ ಭರಮಪ್ಪನಾಯಕನ ಜೊತೆಗೂಡಿ ಹೊಳೆಹೊನ್ನೂರಿಗೆ ಮುತ್ತಿಗೆ ಹಾಕಿದನು. ನಂತರ ಹೊಳೆ ಹೊನ್ನೂರನ್ನು ಫಡದುಲ್ಲಾಖಾನನ ವಶಕ್ಕೆ ಒಪ್ಪಿಸಲಾಯಿತು. ಈ ಉಪಕಾರಕ್ಕೆ ಪ್ರತಿಯಾಗಿ ಫಡದುಲ್ಲಾ ಖಾನನು ದುರ್ಗದ ದೊರೆಗೆ ದೊಡ್ಡೇರಿ ಮತ್ತು ಜಾಜೂರು ಸೀಮೆಗಳನ್ನು ಉಡುಗೊರೆಯಾಗಿ ಕೊಟ್ಟನು.[೩೬]

ಫಡದುಲ್ಲಾಖಾನನು ಸೋದೆ ಮತ್ತು ಬಿದನೂರುಗಳನ್ನು ಸ್ವಾಧೀನಪಡಿಸಿಕೊಂಡ ಬಗೆಯನ್ನು ಕರ್ನಾಟಕ ಕೈಫಿಯತ್ತುಗಳಲ್ಲಿ ಈ ರೀತಿ ಉಲ್ಲೇಖಿಸಲಾಗಿದೆ. "ಯಿ ಖಂಡೆರಾಯನಂನ್ನೆ ಸಮಸ್ತಕಾರ ಬಾರ್ಗಿಯಾಗಿ ಘಟಕದ ಕೆಳಗಿನ ರಾಜ್ಯವೆಲ್ಲಾ ಸ್ವಾಧೀನ ಮಾಡಿಕೊಂಡು ಯೀ ಬಿದನೂರು ಸಂಸ್ಥಾನಕೆ ಶೇರಿಸಿ ಚಿತ್ರಭಾನು ಸಂ|ದ ಪಾಲ್ಗುಣ ಬಹುಳ ೩ಂಗೆ ತರುವಾಯ ಸ್ವಭಾನು ಸಂ|ದಲ್ಲಿ ಸೋದೆ ಸಂಸ್ಥಾನಕೆ ಮೊಹಿಮು ಮಾಡಿ, ಆ ಸಂಸ್ಥಾನ ಸ್ವಾಧೀನವಾಗಬೇಕಾದಕ್ಕೆ ಮೀರ ಫಡದುಲ್ಲಾಖಾನನು ಫೌಜು ಸುಧಾ ಕೊಟ್ಟು ಕಳುಹಿ ಆ ಸಂಸ್ಥಾನ ತನ್ನ ಸ್ವಾಧೀನ ಮಾಡಿಕೊಂಡು ಅಲ್ಲಿ ಕಾರಭಾರಕ್ಕೆ ಕತ್ತಿಗೋಪಾಲ ರಾಜೈಯ್ಯನವರ ಯಿಟ್ಟು"[೩೭] ಎಂದು ಉಲ್ಲೇಖಿಸಲಾಗಿದೆ.

ಫಡದುಲ್ಲಾಖಾನನು ಚಿತ್ರದುರ್ಗ ಮತ್ತು ನಿಡಗಲ್ಲು ಅರಸರೊಂದಿಗೆ ಉತ್ತಮ ಸ್ನೇಹವನ್ನಿಟ್ಟು ಕೊಂಡಿದ್ದನು. ಕ್ರಿ.ಶ.೧೭೭೦ರಿಂದಲೂ ಮುಮ್ಮಡಿ ಹೊಟ್ಟೆಣ್ಣನಾಯಕನು ನಿಡಗಲ್ಲಿನಲ್ಲಿ ತನ್ನ ಆಡಳಿತವನ್ನು ಆರಂಭಿಸಿದ್ದನು. ಇಂತಹ ವೇಳೆಯಲ್ಲಿ ರಾಯದುರ್ಗದ ನಾಯಕರು ಚಿತ್ರದುರ್ಗನಾಯಕನ ಅಧೀನದಲ್ಲಿದ್ದ ನಾಯಕನಹಟ್ಟಿಯನ್ನು ಆಕ್ರಮಿಸಿಕೊಂಡರು. ದುರ್ಗದ ನಾಯಕನಾಗಿದ್ದ ಭರಮಣ್ಣ ನಾಯಕನ ಜೊತೆಗೂಡಿ ಫಡದುಲ್ಲಾಖಾನನು ರಾಯದುರ್ಗದ ಗೌರಸಮುದ್ರದ ಕೋಟೆಯನ್ನು ಆಕ್ರಮಿಸಿ ನಂತರ ಒಪ್ಪಂದದ ಮೇಲೆ ದುರ್ಗದವರ ವಶ ಮಾಡಿದನು. ರಾಯದುರ್ಗದವರು ಪಲಾಯನ ಮಾಡಿದಾಗ, ಅವರನ್ನು ಹಿಮ್ಮೆಟ್ಟಿಸಿದ ಸೈನ್ಯ ಕೊಟ್ಟೂರು ಬಳಿ ನಡೆದ ಭೀಕರ ಕದನದಲ್ಲಿ ರಾಯದುರ್ಗದವರನ್ನು ಪರಾಭವ ಗೊಳಿಸಿತು. ಕೊನೆಗೆ ಫಡದುಲ್ಲಾಖಾನನು ನಾಯಕನಹಟ್ಟಿಯ ಆಕ್ರಮಣವನ್ನು ತೆರವು ಮಾಡುವುದರಲ್ಲಿ ಯಶಸ್ವಿಯಾದನು.

ಈ ಘಟನೆಯು ಎರಡು ಸಮಕಾಲೀನ ದೊರೆಗಳ ನಡುವಣ ಬಾಂಧವ್ಯವನ್ನು ಮತ್ತಷ್ಟು ಹೆಚ್ಚಿಸಲು ಸಹಕಾರಿಯಾಯಿತು. ಆದರೆ ಇದು ಹಲವು ಕಾರಣಗಳಿಂದ ಬಹುಕಾಲ ಉಳಿಯಲಿಲ್ಲ. ಇವನ

ನಂತರ ದಾವೂದ್ ಖಾನ್ ಎಂಬುವನು ಕೆಲವು ದಿನಗಳ ಕಾಲ ಸಿರಾದ ನವಾಬನಾಗಿ ಆಳ್ವಿಕೆ ನಡೆಸಿದನು. ಆದರೆ ಕ್ರಿ.ಶ.೧೭೧೩ರ ವೇಳೆಗೆ ಸಿರಾ ಪ್ರಭುತ್ವದಲ್ಲಿ ಕೊಂಚ ಬದಲಾವಣೆ ಆಯಿತು. ಕರ್ನಾಟಕ-ಬಿಜಾಪುರ ಎಲ್ಲದಕ್ಕೂ ಏಕಾಧಿಪತಿಯಾಗಿದ್ದ ಸಾದತ್-ಉಲ್ಲಾ-ಖಾನನು ಈ ಕಾಲಕ್ಕೆ ಪಾಯಂಘಾಟ ಪ್ರಾಂತ್ಯಕ್ಕೆ ಅರಸನಾಗಿ ಹೆಸರು ಪಡೆದನು.

ಸಾದತ್-ಉಲ್ಲಾ-ಖಾನನು ದಕ್ಷಿಣದ ಮೊಗಲರ ಎಲ್ಲಾ ಪ್ರದೇಶಗಳ ಅಧಿಪತ್ಯವನ್ನು ಸಂಪಾದಿಸಿದನು. ಈ ವೇಳೆಗೆ ಮೊಗಲರ ಆಡಳಿತ ಪ್ರದೇಶಗಳ ಪರಿಸ್ಥಿತಿಯನ್ನು ಕೂಲಂಕಷವಾಗಿ ವಿವೇಚಿಸಿ ಆಡಳಿತ ಸುಧಾರಿಸಲು ಕ್ರಿ.ಶ.೧೭೧೭ರಲ್ಲಿ ಸಿರಾವನ್ನು ಆರ್ಕಾಟಿನ ನಿಯಂತ್ರಣದಿಂದ ಬೇರ್ಪಡಿಸಿದನು. ನಂತರ ಕಡಪಾ, ಕರ್ನೂಲು, ಸವಣೂರುಗಳಿಗೆ ಹೊಸ ನವಾಬರನ್ನು ನೇಮಿಸಿ ಅದೇ ರೀತಿ ಸಿರಾಕ್ಕೂ ಅಮೀನ್ ಖಾನ್‌ನನ್ನು ಕ್ರಿ.ಶ.೧೭೧೭ರಲ್ಲಿ ನವಾಬನಾಗಿ ನೇಮಕ ಮಾಡಲಾಯಿತು. ಈ ವೇಳೆಗೆ ಚಿಕ್ಕದೇವರಾಜ ಒಡೆಯರು ರಾಜ್ಯದ ಬೊಕ್ಕಸದಲ್ಲಿ ಅಪಾರ ದ್ರವ್ಯವನ್ನು ಕೂಡಿಟ್ಟು 'ನವಕೋಟಿ ನಾರಾಯಣ' ಎಂಬ ಅಭಿದಾನ ಪಡೆದ ಸುದ್ದಿ ಕೇಳಿದ ಸಾದತ್-ಉಲ್ಲಾ-ಖಾನನಿಗೆ ಮೈಸೂರಿನ ಪ್ರಾಂತ್ಯವು ತನ್ನ ಕೈತಪ್ಪಿ ಹೋಗುವುದು ಇಷ್ಟವಾಗಿರಲಿಲ್ಲ. ಇದರಿಂದ ಸಾದತ್-ಉಲ್ಲಾ-ಖಾನನು ಕಡಪಾ, ಕರ್ನೂಲು, ಸವಣೂರು ನವಾಬರನ್ನೂ ಗೂಟಿಯ ಮರಾಠ ನಾಯಕನನ್ನು ಜೊತೆಗೂಡಿಸಿಕೊಂಡು ಮೈಸೂರಿನ ಮೇಲೇರಿ ಬಂದನು. ಇವರೆಲ್ಲರಿಗಿಂತ ಮೊದಲೇ ಮೈಸೂರನ್ನು ಕಬಳಿಸಲೆಣಿಸಿದ ಅಮೀನ್ ಖಾನ್‌ನು ಮೈಸೂರು ಸೈನ್ಯವನ್ನು ಎದುರಿಸಲು ಅವನಿಗಿಂತ ಮುಂಚಿತವಾಗಿಯೇ ಬಾರೀ ಸೈನ್ಯದೊಂದಿಗೆ ಬಂದನು. ಅಷ್ಟರೊಳಗೆ ನವಾಬ ಕೂಟದವರೂ ಶ್ರೀರಂಗಪಟ್ಟಣಕ್ಕೆ ತಲುಪಿದರು. ಕೊನೆಗೆ ಸಾದತ್ -ಉಲ್ಲಾ-ಖಾನನ ಜೊತೆ ಅಮೀನ್‌ಖಾನನೂ ಸೇರಿ ಶ್ರೀರಂಗಪಟ್ಟಣವನ್ನು ಮುತ್ತುವುದೆಂದು ನಿರ್ಧರಿಸಿದರು ಈ ಕೂಟಕ್ಕೆ ಸಾದತ್ -ಉಲ್ಲಾ-ಖಾನನೇ ಮುಂದಾಳಾಗಿ ನಿಂತನು. ಇಷ್ಟು ದೊಡ್ಡ ವೈರಿ ವೃಂದವನ್ನು ಬಡಿದಟ್ಟುವುದು ಅಸಾಧ್ಯವೆಂಬುದನ್ನು ಅರಿತ ದೊಡ್ಡ ಕೃಷ್ಣರಾಜ ಒಡೆಯರು ಸಾದತ್ -ಉಲ್ಲಾ-ಖಾನರಿಗೆ ಒಂದು ಕೋಟಿ ರೂಪಾಯಿ ನೀಡಲೊಪ್ಪಿದರು. ಖಾನನು ಈ ಹಣದಲ್ಲಿ ಒಬ್ಬೊಬ್ಬ ನವಾಬನಿಗೂ ೧೨ಲಕ್ಷ ರೂಪಾಯಿ ಕೊಟ್ಟು ಉಳಿದ ಧನವನ್ನು ತಾನೇ ಇಟ್ಟುಕೊಂಡನು.[೩೮]

ಈ ಕುರಿತು ಕೆಳದಿ ನೃಪವಿಜಯವು "ಸಾದತ್-ಉಲ್ಲಾ-ಖಾನನ ಕಡೆಯ ದಿವಾನ ಸಿದ್ದೋಜಿ ಘೋರ್ಪಡೆ ಎಂಬುವನು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದಾಗ ಮೈಸೂರಿನವರು ಬೆನ್ನಟ್ಟಿ ಓಡಿಸಿದರು. ಆದರೆ ಸಾದತ್-ಉಲ್ಲಾ-ಖಾನನೇ ಸೇನೆಯೊಂದಿಗೆ ಸುಬೇದಾರ ಲಿಂಗಪ್ಪನನ್ನು ಕರೆದುಕೊಂಡು ಮೈಸೂರು ಅರಸರ ಮೇಲೆ ದಾಳಿ ಮಾಡಲು ಬಂದಾಗ, ಮೈಸೂರಿನವರು ಸಂಧಾನಕ್ಕೆ ಬಂದರೆಂದು[೩೯] ತಿಳಿಸುತ್ತದೆ ಎಂದು ಕಲ್ಲಾಪುರ ಜಿ.ವಿ.ಯವರು ತಿಳಿಸಿದ್ದಾರೆ.

ದೊಡ್ಡ ದೇವರಾಜ ಒಡೆಯರ ಕಾಲದ ಕಾಗದ ಪ್ರಕಾರ ಆರ್ಕಾಟಿನ ನವಾಬನಾದ ಸಾದತ್ -ಉಲ್ಲಾ-ಖಾನರು ಸಿರಾದ ಪ್ರಾಂತ್ಯಾಧಿಕಾರಿಯಾದ ತಾಹರ್‌ಖಾನರಿಗೆ ಸಿರಾದ ಕೋಟೆ ಬಿಡಿಸಿಕೊಡುವ

ಸಲುವಾಗಿ ತಾಹರ್‌ಖಾನರ ಸಹಾಯಕ್ಕೆ ಬಂದಂತೆ ಕಂಡುಬರುತ್ತದೆ.[೪೦] ಹೀಗೆ ಆರ್ಕಾಟಿನ ನವಾಬನಾದ ಸಾದತ್-ಉಲ್ಲಾ-ಖಾನನು ದಕ್ಷಿಣದ ಕೆಲವು ನವಾಬರುಗಳನ್ನು ಒಂದುಗೂಡಿಸಿ ಕೊಳ್ಳುವುದರ ಮೂಲಕ ತನ್ನ ಕಾರ್ಯವನ್ನು ಈಡೇರಿಸಿಕೊಂಡು ಹಿಂದಿರುಗಿದನು. ನಂತರ ಆರ್ಕಾಟಿನವರ ಹಿಡಿತದಿಂದ ಸಿರಾವು ಮತ್ತೊಮ್ಮೆ ಮೊಗಲರ ಅಧೀನಕ್ಕೆ ಬಂದಿತು.

ನಂತರ ೨ನೆಯ ದರ್ಗಾಕೂಲಿಖಾನ್ ಕ್ರಿ.ಶ.೧೭೧೫ರಲ್ಲಿ ಸಿರಾದ ನವಾಬನಾದನು. ತಕ್ಷಣವೇ ಇವನು ಬಾಗೂರಿನ ವಿರೋಧವನ್ನು ಎದುರಿಸಬೇಕಾಯಿತು. ಅಂದಿನ ರಾಜಕೀಯ ವಾತಾವರಣವನ್ನು ಅರ್ಥಮಾಡಿಕೊಂಡ ಖಾನನು ಚಿತ್ರದುರ್ಗದವರ ಸ್ನೇಹ ಸಂಪಾದಿಸಿ ಅವರ ಸಹಾಯವನ್ನು ಕೇಳಿದನು. ಭರಮಪ್ಪನಾಯಕನು ಒಪ್ಪಿ ಬಾಗೂರಿನ ಮೇಲೆ ಆಕ್ರಮಣ ಮಾಡಿ, ಬಾಗೂರನ್ನು ಗೆದ್ದು ಸಿರಾದವರಿಗೆ ಒಪ್ಪಿಸಿದನು. ಈ ಉಪಕಾರಕ್ಕೆ ಪ್ರತಿಯಾಗಿ ನವಾಬನು ಮಾವಿನಕಟ್ಟೆ ಗ್ರಾಮವನ್ನು ಭರಮಪ್ಪನಾಯಕನಿಗೆ ಬಿಟ್ಟುಕೊಟ್ಟನು. ಭರಮಪ್ಪನಾಯಕನ ನಂತರ ದುರ್ಗದಲ್ಲಿ ಹಿರೇಮದಕರಿನಾಯಕನ ಆಳ್ವಿಕೆ ಆರಂಭವಾದಾಗ ಅವನು ನವಾಬನ ಸ್ನೇಹವನ್ನು ದಿಕ್ಕರಿಸಿ ಸಿರಾದವರಿಗೆ ಸೇರಿದ್ದ ಅಜ್ಜಂಪುರ, ದೊಂಳೆ, ಕೋಟೆಗಳನ್ನು ಗೆದ್ದುಕೊಂಡನು.

ಸಿರಾದ ದರ್ಗಾಕೂಲಿಖಾನನು ತನ್ನ ಕೈಕೆಳಗೆ ನಾಲ್ಕುನೂರು ಕಾಲಾಳು, ನೂರು ರಾವುತರನ್ನು ಹೊಂದಿದ್ದು, ತನ್ನ ಪ್ರಾಂತ್ಯಗಳನ್ನು ರಕ್ಷಿಸಿಕೊಳ್ಳುವ ಸಲುವಾಗಿ ದುರ್ಗದವರ ಮೇಲೆ ಯುದ್ಧ ಮಾಡ ಬೇಕಾದ ಪ್ರಸಂಗ ಒದಗಿ ಬಂದಿತು. ಕಳೆದುಕೊಂಡಿದ್ದ ಪ್ರದೇಶಗಳನ್ನು ಗೆಲ್ಲಲು ನವಾಬರು ಅಜ್ಜಂಪುರ ಕೋಟೆಗೆ ಮುತ್ತಿಗೆ ಹಾಕಿ ಅಲ್ಲಿದ್ದ ಚಿತ್ರದುರ್ಗದ ಅಧಿಕಾರಿಗಳನ್ನು ಓಡಿಸಿ ಕೋಟೆಯನ್ನು ಗೆದ್ದುಕೊಂಡನು.

ಕ್ರಿ.ಶ.೧೬೮೯ರಲ್ಲಿ ದೊಡ್ಡಬಳ್ಳಾಪುರವನ್ನು ಖಾಸಿಂಖಾನನು ತನ್ನ ಹಿಡಿತದಿಂದ ಖೂಲಿಖಾನ್ ಎಂಬ ಪ್ರಿಯ ದಳಪತಿಯೊಬ್ಬನಿಗೆ ಜಹಗೀರು ರೂಪದಲ್ಲಿ ನೀಡಿದ್ದನು. ಆದರೆ ಖೂಲಿಖಾನ್ ಬಹುಬೇಗ ನಿಧನ ಹೊಂದಲಾಗಿ ಸಿರಾದ ಸುಬೇದಾರನಾಗಿದ್ದ ದರ್ಗಾಕೂಲಿಖಾನನಿಗೆ ಈ ಪ್ರದೇಶ ಜಹಗೀರಾಗಿ ಪ್ರಾಪ್ತವಾಯಿತು. ಆದರೆ ಅವನು ಕೇವಲ ಒಂದು ವರ್ಷ ದೊಡ್ಡಬಳ್ಳಾಪುರವನ್ನು ತನ್ನ ಹತೋಟಿ ಯಲ್ಲಿಟ್ಟುಕೊಂಡು ಆಳ್ವಿಕೆ ನಡೆಸಿದನು.

## ೩.೬. ಅಬ್ದುಲ್ ನಭೀ ತಾಹರ್‌ಖಾನ್(ಕ್ರಿ.ಶ.೧೭೨೪-೧೭೪೨)

ದರ್ಗಾಕೂಲಿಖಾನನ ಮರಣಾನಂತರ ಅವನ ಮಗ ಅಬ್ದುಲ್ ರಸೂಲ್‌ಖಾನ್ ಅಧಿಕಾರಕ್ಕೆ ಬಂದನು. ಅಬ್ದುಲ್ ರಸೂಲ್ ಖಾನನು ಫತೇ ಮಹಮದ್‌ನ ಸಹಾಯದಿಂದ ಸಿರಾವನ್ನು ಬಿಟ್ಟುಕೊಡಲು ನಿರಾಕರಿಸಿದನು. ಆದರೆ ಆಂತರಿಕ ಕಾರಣಗಳಿಂದ ಉಂಟಾದ ಸಶಸ್ತ್ರ ಘರ್ಷಣೆಯಲ್ಲಿ ಅಬ್ದುಲ್ ರಸೂಲ್‌ಖಾನ್ ಮತ್ತು ಪತೇಮಹಮದ್‌ರಿಬ್ಬರೂ ಮಡಿದರು. ಈ ನಡುವೆ ತಾಹರ್ ಖಾನನು ತನ್ನ ಪೋಷಕನಾದ ಸಾದತ್-ಉಲ್ಲಾ-ಖಾನನ ಪ್ರಭಾವದಿಂದ ಸಿರಾದ ಸುಬೇದಾರಿಕೆಯನ್ನು ಸಂಪಾದಿಸಿಕೊಂಡನು.[೪೧]

ಅಬ್ದುಲ್ ನಭೀ ತಾಹರ್‌ಖಾನನು ಆರ್ಕಾಟಿನ ನವಾಬನಾಗಿದ್ದ ಸಾದತ್-ಉಲ್ಲಾ-ಖಾನನ ಹಿತೈಷಿಯಾಗಿದ್ದನು. ಇದರಿಂದ ಮೈಸೂರಿನತ್ತ ನುಗ್ಗಲು ಒಳ್ಳೆಯ ಅವಕಾಶ ದೊರೆಯಿತು. ಕ್ರಿ.ಶ.೧೭೨೫ರಲ್ಲಿ ಸವಣೂರು, ಕಡಪ, ಕರ್ನೂಲುಗಳ ನವಾಬರು ಮೈಸೂರಿನ ವಿರುದ್ಧ ಒಕ್ಕೂಟವನ್ನು ರಚಿಸಿದರು. ಇಕ್ಕೇರಿ, ಗುತ್ತಿ ಮತ್ತು ಸಿರಾದ ಪಾಳೆಯಗಾರರು ಈ ಒಕ್ಕೂಟಕ್ಕೆ ಬೆಂಬಲ ನೀಡಿದರು. ನಿಜಾಮನ ಆಶೀರ್ವಾದವೂ ಈ ಒಕ್ಕೂಟಕ್ಕೆ ದೊರೆಯಿತು. ತಾಹರ್‌ಖಾನ್ ಶ್ರೀರಂಗಪಟ್ಟಣದ ಮುತ್ತಿಗೆಯಲ್ಲಿ ಪ್ರಧಾನ ಪಾತ್ರವಹಿಸಿದ ಕಾರಣ ಮೈಸೂರು ರಾಜನ ಅಧಿಕಾರಿಗಳು ಒಪ್ಪಂದಕ್ಕೆ ಬಂದು ಕಪ್ಪಕಾಣಿಕೆ ಕೊಡಲು ತೀರ್ಮಾನಿಸಿದರು. ಸಾದತ್-ಉಲ್ಲಾ-ಖಾನ್ ಬದುಕಿರುವವರೆಗೂ ತಾಹರ್‌ಖಾನ್ ಅವನಿಗೆ ನಿಷ್ಠೆಯಿಂದ ನಡೆದುಕೊಂಡನು.

ತಾಹರ್‌ಖಾನನು ಕ್ರಿ.ಶ.೧೭೨೫ರ ನಂತರ ಕೆಲವು ವರ್ಷಗಳ ಕಾಲ ಸಿರಾದ ನವಾಬನಾಗಿದ್ದನು. ಇವನು ಚಿತ್ರದುರ್ಗಕ್ಕೆ ಸೇರಿದ ಅಜ್ಜಂಪುರ ಕೋಟೆಯನ್ನು ಹಿರಿಯ ಮದಕರಿನಾಯಕನ ಕಾಲದಲ್ಲಿ ಮುತ್ತಿದನೆಂದು ಚಿತ್ರದುರ್ಗದ ಚರಿತ್ರೆಯಿಂದ ತಿಳಿದುಬರುವುದು. ಹೀಗೆ ಅಬ್ದುಲ್ ನಭೀ ತಾಹರ್‌ಖಾನ್ ಕೆಲವು ವರ್ಷಗಳ ಕಾಲ ಸಿರಾವನ್ನು ಆಡಳಿತ ಕೇಂದ್ರವಾಗಿಸಿಕೊಂಡು ಆಳ್ವಿಕೆ ನಡೆಸಿದನು.

### ೩.೭. ದಿಲಾವರ್ ಖಾನ್(ಕ್ರಿ.ಶ.೧೭೪೨-೧೭೫೬)

ಕ್ರಿ.ಶ.೧೭೪೨ರಲ್ಲಿ ಸಿರಾದ ನವಾಬನಾದ ದಿಲಾವರ್ ಖಾನ್ ಸಿರಾದ ನವಾಬರಲ್ಲೇ ಅತ್ಯಂತ ಪ್ರಮುಖನಾಗಿದ್ದನು. ಈತನ ಕಾಲದಲ್ಲಿ ರಾಜಕೀಯ ಶಾಂತಿ ಆರ್ಥಿಕ ಪ್ರಗತಿ ಮತ್ತು ಸಾಂಸ್ಕೃತಿಕ ಬೆಳವಣಿಗೆಗಳುಂಟಾದವು. ಕೆಲವು ಸುತ್ತ-ಮುತ್ತಲ ಪಾಳೆಯಗಾರರನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳುವುದರ ಮೂಲಕ ಸ್ವತಂತ್ರ ಅರಸನಂತೆ ಮೆರೆದನು.

ಕ್ರಿ.ಶ.೧೭೪೮ರಲ್ಲಿ ಅಧಿಕಾರ ವಹಿಸಿಕೊಂಡ ಮುದ್ದುವೀರಪ್ಪನಾಯಕನು ಹಾಗಲವಾಡಿಯಲ್ಲಿ ಆಳ್ವಿಕೆ ನಡೆಸುತ್ತಿದ್ದನು. ಈತನು ಸಿದ್ದೇಶ್ವರ ಸ್ವಾಮಿಯ ಅನುಗ್ರಹದಿಂದ ದುರ್ಭೇದ್ಯವಾದ ಕೋಟೆಕೊತ್ತಲಗಳನ್ನು ಕಟ್ಟಿಸಿ, ಅದರಲ್ಲಿ ಶತ್ರುಭಯಂಕರವಾದ 'ಹುಚ್ಚು ರಾಮಲಿಂಗ' ಎಂಬ ಹೆಸರಿನ ಫಿರಂಗಿಯನ್ನು ನಿಲ್ಲಿಸಿ ಹಾಗಲವಾಡಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದನು. ಈ ವೇಳೆಗೆ ಮೊಗಲರ ಸೈನ್ಯ ದಾಳಿ ಮಾಡಲು ಬಂದಿರುವ ಸುದ್ದಿ ಸ್ವಾಮಿನಿಷ್ಠ ಸೇವಕ ಚನ್ನರಾವುತನಿಂದ ಮುದ್ದುವೀರಪ್ಪನಿಗೆ ತಿಳಿಯಿತು. ಈ ವೇಳೆಗೆ ಮೊಗಲರ ದಳಪತಿಯಾದ ಸಲಾಬತ್ ಜಂಗ್‌ನು ದಕ್ಷಿಣ ಕರ್ನಾಟಕದಲ್ಲಿ ದಾಳಿ ಮಾಡಿದಾಗ ಮೈಸೂರು, ಕೆಳದಿ, ಚಿತ್ರದುರ್ಗ ಮುಂತಾದ ಸಣ್ಣಪುಟ್ಟ ಪಾಳೆಯಗಾರರು ಈ ದಾಳಿಯನ್ನು ಎದುರಿಸಬೇಕಾಯಿತು. ಈ ವೇಳೆಗೆ ಸಲಾಬತ್ ಜಂಗ್‌ನು ಚಿತ್ರದುರ್ಗದ ಮೇಲೆ ಆಕ್ರಮಣ ಮಾಡುವ ಉದ್ದೇಶ ಹೊಂದಿದ್ದನು. ಆದರೆ ಅದರ ಅಂಚಿನಲ್ಲಿದ್ದ ಹಾಗಲವಾಡಿಗೆ ಅಪಾಯ ಬರುವುದೆಂಬ ಉದ್ದೇಶದಿಂದ ಮುದ್ದುವೀರಪ್ಪನು ಯುದ್ಧಕ್ಕಿಂತ ಸಂಧಾನವೇ ಲೇಸೆಂದು, ಈ ರಾಯಭಾರಕ್ಕೆ

ಚತುರನಾದ ಚನ್ನನಾಯಕನನ್ನು ನಿಯೋಜಿಸಿದನು. ಆದರೂ ಖಾನನನ್ನು ನಂಬಿ ಸುಮ್ಮನೆ ಕೂರದೆ ಸಲಾಬತ್ತನ ವಿರುದ್ಧ ತನ್ನ ರಕ್ಷಣೆಗೆ ಬೇಕಾದ ಎಲ್ಲಾ ಮುಂಜಾಗರೂಕತಾ ಕ್ರಮಗಳನ್ನು ಕೈಗೊಂಡನು. ಗಡಿ ಪ್ರದೇಶದಲ್ಲಿ ಬಲವಾದ ಭೂ ಸೇನೆ ಮತ್ತು ಅಶ್ವಬಲವನ್ನಿಟ್ಟು ಬಲಪಡಿಸಿದನು. ಹಾಗಲವಾಡಿಯ ನಾಯಕನು ತನ್ನೊಡನೆ ಸ್ನೇಹದಿಂದ ಇರಲು ಇಷ್ಟಪಟ್ಟ ಕಾರಣ ತಾನು ಅವನನ್ನು ಬೇಟಿ ಮಾಡುವುದಾಗಿ ಸಲಾಬತ್ ಜಂಗ್ ಹೇಳಿ ಕಳುಹಿಸಿದನು. ಆಗ ಮುದ್ದುವೀರಪ್ಪನು ಅವನನ್ನು ಮರ್ಯಾದೆಯಿಂದ ಬರಮಾಡಿಕೊಂಡನು. ಕೂಡಲೇ ಸಲಾಬತ್ತನು ಹಾಗಲವಾಡಿಯ ಕೆರೆಯ ಮುಂದೆ ಇಳಿದುಕೊಂಡು ತಮ್ಮ ಗಾಡಿಯನ್ನು ಕಟ್ಟುವುದಕ್ಕೆ ಐವತ್ತು ಜೊತೆ ಎತ್ತುಗಳನ್ನು ಕಳುಹಿಸಬೇಕೆಂದು ಹೇಳಿ ಕಳುಹಿಸಿದನು. ನಾಯಕನು ಎತ್ತುಗಳನ್ನು ಒದಗಿಸುವ ಪ್ರಯತ್ನದಲ್ಲಿರುವಾಗ, ನೀಚ ಬುದ್ಧಿಯಿಂದ ಖಾನನು ಸೇನಾ ಸಮೇತ ಊರಿನ ಮೇಲೆ ನುಗ್ಗಿ ಹಾಗಲವಾಡಿ ಕೋಟೆಯನ್ನು ಹಲ್ಲೆ ಮಾಡಿ, ಅರಮನೆಯನ್ನೂ ಊರನ್ನು ಲೂಟಿ ಮಾಡಿದನು. ನಂತರ ಕ್ರಿ.ಶ.೧೭೫೫ರಲ್ಲಿ ಆ ಸಂಸ್ಥಾನವನ್ನು ಸಿರಾದ ಮೊಗಲ್ ಸುಬೇದಾರನಾದ ದಿಲಾವರ್ ಖಾನನ ವಶಮಾಡಿ ಅಲ್ಲಿ ಅವನ ಠಾಣ್ಯವನ್ನು ಹಾಕಿಸಿ, ದಂಡನ್ನು ತೆಗೆದುಕೊಂಡು ಹೊರಟು ಹೋದನು.

ಸಲಾಬತ್ ಜಂಗ್ ಹಾಗಲವಾಡಿಯನ್ನು ಬಿಟ್ಟು ಹೋದ ಮೇಲೆ ಮುದ್ದುವೀರಪ್ಪನಾಯಕನು ಚನ್ನರಾವುತ ಮತ್ತು ಅನೇಕ ಅಧಿಕಾರಿಗಳೊಂದಿಗೆ ವೇಷ ಮರೆಸಿಕೊಂಡು ಶತ್ರುಗಳ ಕೈಗೆ ಸಿಗದೆ ಮೂಗನಾಯ್ಕನಕೋಟೆಗೆ ಓಡಿಹೋದನು. ನಂತರ ಮುದ್ದುವೀರಪ್ಪನಾಯಕನು ಅಲ್ಲಿಗೆ ತನ್ನ ಹಳೇ ದಂಡನ್ನು ಬರಮಾಡಿಕೊಂಡನಲ್ಲದೆ, ಅಲ್ಲಿ ಹೊಸದಾಗಿ ಸೇನೆಯನ್ನು ಸೇರಿಸಿಕೊಂಡು ಹಾಗಲವಾಡಿಯಲ್ಲಿದ್ದ ದಿಲಾವರ್ ಖಾನನ ಮೇಲೆ ಯುದ್ಧಕ್ಕೆ ಸಿದ್ಧನಾದನು. ಸಿದ್ಧಗಿರಿ ದುರ್ಗದಿಂದ ದಂಡನ್ನು ನಡೆಸಿಕಂಡು ಅಮವಾಸ್ಯೆಯ ಕಾರಿರುಳಲ್ಲಿ ರಹಸ್ಯ ದ್ವಾರದಿಂದ ಹಾಗಲವಾಡಿ ಕೋಟೆಯ ದ್ವಾರವನ್ನು ಪ್ರವೇಶಿಸಿ, ಹಠಾತ್ತನೆ ದಾಳಿಯಿಟ್ಟು 'ಹುಚ್ಚುರಾಮಲಿಂಗ' ಫಿರಂಗಿಯನ್ನು ಹಾರಿಸಿದನು.[೪೨] ಇದರಿಂದ ಹಾಗಲವಾಡಿ ನಾಯಕನ ಏಟು ಬಲವಾಯಿತು. ಇದರಿಂದ ದಿಲಾವರ್‌ಖಾನನು ಮುದ್ದುವೀರಪ್ಪನಾಯಕನ ವಿರುದ್ಧ ಹೋರಾಡಲು ಅಸಾಧ್ಯವಾಗಲಾಗಿ ಸಂಧಿ ಮಾಡಿಕೊಳ್ಳಲು ಒಪ್ಪಿದನು. ಅಲ್ಲದೇ ಮುದ್ದುವೀರಪ್ಪನಾಯಕನ ಪೌರುಷವನ್ನು ಕೊಂಡಾಡಿದ ದಿಲಾವರ್‌ಖಾನನು ಆತನಿಗೆ 'ರಾಜಾ-ಜಂಗ್-ಬಹದ್ದೂರ್' ಎಂಬ ಬಿರುದನ್ನು ಕೊಟ್ಟು ಅವನೊಂದಿಗೆ ಕರಾರನ್ನು ಮಾಡಿಕೊಂಡನು. ಈ ಕರಾರಿನ ಪ್ರಕಾರ ದಿಲಾವರ್ ಖಾನನು ಹಾಗಲವಾಡಿಯನ್ನು ಬಿಟ್ಟು ಹೋದನಲ್ಲದೆ, ಮಂಚಲದೊರೆ ಮತ್ತು ಅದಕ್ಕೆ ಸೇರಿದ ೧೨ ಹಳ್ಳಿಗಳು ಮುದ್ದುವೀರಪ್ಪನಿಗೆ ಉಂಬಳಿಯಾಗಿ ಬಂದವು.[೪೩]

ಮದಕರಿನಾಯಕನ ನಂತರ ಇವನ ಪುತ್ರನಾದ ಕಸ್ತೂರಿ ರಂಗಪ್ಪನಾಯಕನು ಉತ್ತರಾಧಿಕಾರಿಯಾದನು. ಕಸ್ತೂರಿ ರಂಗಪ್ಪನು ಉತ್ತರ ಮತ್ತು ದಕ್ಷಿಣ ಭಾಗಕ್ಕೂ ಹಲವಾರು ದಂಡಯಾತ್ರೆಗಳನ್ನು ಕೈಗೊಂಡನು. ಆದರೆ ರಂಗಪ್ಪನು ಅದೇ ಕಾಲಕ್ಕೆ ಸಿರಾದ ಸುಬೇದಾರನಾದ ದಿಲಾವರ್ ಖಾನನೊಂದಿಗೆ ಸ್ನೇಹದಿಂದಲೇ

ಇದ್ದನು. ಇದರಿಂದ ಸಿರಾದ ಸುಬೇದಾರ ರಂಗಪ್ಪನಿಗೆ 'ತಲ್ಲಾರಿ ನಾಡಗೌಡ' ಎಂಬ ಬಿರುದನ್ನು ನೀಡಿ ಗೌರವಿಸಿದ್ದನು.

ಸಿರಾದ ಸುಬೇದಾರನಾದ ದಿಲಾವರಖಾನನು ಬಸವಾಪಟ್ಟಣವನ್ನು ಸಿರಾದ ಅಧೀನತೆಗೆ ಸೇರಿಸಿಕೊಂಡನು. ಇವನ ಕಾಲದಲ್ಲಿ ಬಸವಾಪಟ್ಟಣ ಅಭಿವೃದ್ಧಿಗೆ ಬಂದಿತೆಂದು ಹೇಳಲಾಗಿದೆ. ಈತನು ಬಸವಾಪಟ್ಟಣದಲ್ಲಿ ಒಂದು ಕೋಟೆಯನ್ನು ಕಟ್ಟಿಸಿದನು. ಇದರ ಬಳಿಯಲ್ಲಿಯೇ ಒಂದು ಮಸೀದಿ ಇದ್ದುದು ಒಂದು ರೀತಿಯ ಉಭಯ ಧರ್ಮಗಳ ಐಕ್ಯತೆಯ ಸಂಕೇತವಾಗಿದೆ. ಬಸವಾ ಪಟ್ಟಣದ ಕೊಂಚ ದಕ್ಷಿಣಕ್ಕೆ ಬಂಡೆ ಸಾಹೇಬರ 'ಕೆರೆ' ಎಂಬ ತಟಾಕವಿದ್ದು, ಇದು ದಿಲಾವರ್ ಖಾನನಿಂದ ನಿರ್ಮಿತವಾಗಿದೆ. ಇದರಿಂದ ಕೃಷಿ ಯೋಜನೆಗೆ ಈತನು ನೀಡಿದ್ದ ಪ್ರೋತ್ಸಾಹ ವ್ಯಕ್ತವಾಗುತ್ತದೆ.

ದಿಲಾವರ್ ಖಾನನು ಗುಮ್ಮನಾಯಕನಹಳ್ಳಿ ಪಾಳ್ಯದ ಪಾಳೆಯಗಾರನಿಗೆ ಗೊರಂಟ್ಲ ಸಮ್ಮತ ಪ್ರದೇಶವನ್ನು ಮರಾಠರ ಬಾಲಾಜಿ ಬಾಜೀರಾವ್‌ನಿಂದ ಕೊಡಿಸುವಲ್ಲಿ ಯಶಸ್ವಿಯಾದನು.

ಹೀಗೆ ನೆರೆಯ ರಾಜ್ಯಗಳೊಂದಿಗೆ ಶಾಂತಿಯುತವಾಗಿ ವರ್ತಿಸುತ್ತಿದ್ದ ದಿಲಾವರ್ ಖಾನನು ಸಿರಾವನ್ನು ಅಭಿವೃದ್ಧಿಯತ್ತ ಕೊಂಡೊಯ್ಯಲು ಅಪಾರವಾಗಿ ಶ್ರಮಿಸಿದನು. ಈತನ ಕಾಲದಲ್ಲಿ ಸಿರಾವು ಸುಮಾರು ೫೦ ಸಾವಿರ ಮನೆಗಳಿಂದ ತುಂಬಿದ್ದು, ಜನಭರಿತವಾದ ಪ್ರದೇಶವಾಗಿತ್ತು. ಅಲ್ಲಿ ಒಂದು ಸುಂದರವಾದ ಅರಮನೆಯನ್ನು ಕೂಡ ನಿರ್ಮಿಸಿದನು. ಈ ಅರಮನೆಯ ಸೌಂದರ್ಯ ಹೈದರಾಲಿ ಮತ್ತು ಟಿಪ್ಪುವಿಗೆ ಪ್ರೇರಣೆ ನೀಡಿ ಬೆಂಗಳೂರಿನಲ್ಲಿ ಅದೇ ಮಾದರಿಯ ಅರಮನೆಯನ್ನು ನಿರ್ಮಿಸಲು ಕಾರಣವಾಯಿತು. ಈ ವೇಳೆಯಲ್ಲಿ ಸಿರಾ ಪಟ್ಟಣವು ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಮುಂದುವರಿದಿತ್ತೆಂದು ತಿಳಿಯುತ್ತದೆ. ಇದೇ ಸಮಯದಲ್ಲಿಯೇ ಪೂನಾದ ಶ್ರೀಮಂತ ಪೇಶ್ವೆ ಬಾಲಾಜಿ ಬಾಜೀರಾವ್ ಮೈಸೂರಿನ ಪ್ರದೇಶಗಳ ಮೇಲೆ ದಾಳಿ ಮಾಡಲಾರಂಭಿಸಿದನು. ಸಿರಾದ ಮೇಲೆ ನಡೆದ ಯುದ್ಧದಲ್ಲಿ ದಿಲಾವರ್ ಖಾನ್ ಪರಾಭವ ಹೊಂದಿದ್ದನು. ನಂತರ ಸಿರಾವು ಮರಾಠರ ಅಧೀನಕ್ಕೆ ಒಳಗಾಯಿತು.

## ೩.೮. ಹೈದರಾಲಿ ಮತ್ತು ಟಿಪ್ಪು(ಕ್ರಿ.ಶ.೧೭೬೧-೧೭೯೯)

ಈ ಶತಮಾನದ ಕರ್ನಾಟಕ ಇತಿಹಾಸದಲ್ಲಿ ಮೈಸೂರು ಸಂಸ್ಥಾನದ ರಾಜಕಾರಣವೂ ಕೂಡಾ ಪ್ರಮುಖವಾಗಿದೆ. ಹೈದರನ ಉದಯಕ್ಕೆ ಮುನ್ನ ಮೈಸೂರು ದಕ್ಷಿಣ ಭಾರತದ ಮಧ್ಯೆ ಇದ್ದ ಒಂದು ರಾಜ್ಯ. ಮೊಗಲ್-ಮರಾಠ ವ್ಯವಹಾರಗಳ ತುದಿಯಿಂದ ತನ್ನಷ್ಟಕ್ಕೆ ಇದ್ದ ಸಂಸ್ಥಾನ ಮೈಸೂರು. ಬಿಜಾಪುರ ಮತ್ತು ಗೋಲ್ಕಂಡ ರಾಜ್ಯಗಳು ಕ್ರಮವಾಗಿ ಕ್ರಿ.ಶ.೧೬೮೬-೮೭ರಲ್ಲಿ ಬಿದ್ದು ಹೋದಾಗ ಮೊಗಲ್ ಸಾಮ್ರಾಜ್ಯದ ಗತಿಯು ಮೈಸೂರಿನ ಅಂಚಿಗೆ ಬಂದಿತು. ಈ ಪ್ರದೇಶದಲ್ಲಿ ಸಿರಾವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಹೊಸ ಪ್ರಾಂತ್ಯವನ್ನು ರಚಿಸಲಾಯಿತು.

ಹೈದರ್ ಹುಟ್ಟಿದ್ದೇ ಆಳುವುದಕ್ಕಾಗಿ ಮತ್ತು ಇತಿಹಾಸದಲ್ಲಿ ಮಹತ್ವದ ಪಾತ್ರವಹಿಸುವುದಕ್ಕಾಗಿ ಎನ್ನಬಹುದು. ಅಕ್ಬರನಂತೆ ಅವನೂ ಅನಕ್ಷರಸ್ಥ. ಆದರೆ ಜಾಣತನದ ಅರಿವು ಕ್ರಿಯಾಶೀಲಗುಣಗಳಿಂದ ಜೀವನದ ಕಠಿಣ ಸಂದರ್ಭಗಳನ್ನು ದಿಟ್ಟತನದಿಂದ ಎದುರಿಸುತ್ತಿದ್ದನು. ೧೭೪೯ರ ದೇವನಹಳ್ಳಿಯ ಯುದ್ಧದಲ್ಲಿ ಅನುಭವ ಪಡೆದುಕೊಂಡ ನಂತರ ನಂಜರಾಜನು ಹೈದರ್‌ನನ್ನು ನಾಯಕ ದರ್ಜೆಗೆ ಏರಿಸಿದನು. ಈ ವೇಳೆಗೆ ಹೈದರಾಬಾದಿನಿಂದ ಬಂದಿದ್ದ ಬಸಾಲತ್ ಜಂಗನು ಕರ್ನಾಟಕ ಪ್ರಾಂತ್ಯದಲ್ಲಿ ಮರಾಠರು ಆಕ್ರಮಿಸಿಕೊಂಡಿದ್ದ ಪ್ರದೇಶಗಳನ್ನು ವಶಪಡಿಸಿಕೊಳ್ಳಲು ಇಚ್ಛಿಸಿದನು. ಅವನ ಗುರಿಗೆ ಹೊಂದಿಕೊಳ್ಳುವ ಪ್ರದೇಶಗಳಲ್ಲಿ ಸಿರಾ ಭೂ ಪ್ರದೇಶವು ಒಂದಾಗಿತ್ತು. ಮರಾಠರ ವಶದಲ್ಲಿದ್ದ ಹೊಸ ಕೋಟೆ ಮತ್ತಿತರ ಪ್ರದೇಶಗಳನ್ನು ಹೈದರನ ಸಹಾಯದಿಂದ ಬಿಸಾಲತ್ ಜಂಗ್ ಗೆದ್ದನು. ಇದಕ್ಕೆ ಪ್ರತಿಫಲವಾಗಿ ಹೈದರನಿಗೆ ಬಸಾಲತ್ ಜಂಗನು 'ನವಾಬ' ಎಂಬ ಬಿರುದು ನೀಡುವುದರ ಜೊತೆಗೆ ಆತನಿಂದ ಮೂರು ಲಕ್ಷ ರೂ.ಗಳನ್ನು ತೆಗೆದುಕೊಂಡು ಸಿರಾದ ನವಾಬಗಿರಿಯನ್ನು ಕ್ರಿ.ಶ.೧೭೬೧ರಲ್ಲಿ ವಹಿಸಿಕೊಟ್ಟನು.[೪೪]

ಕ್ರಿ.ಶ.೧೭೬೧ರಲ್ಲಿ ಶ್ರೀರಂಗಪಟ್ಟಣದ ನವಾಬನಾದ ಹೈದರನು ಒಂದು ಲಕ್ಷ ದಂಡಿನೊಂದಿಗೆ ಚಿತ್ರದುರ್ಗಕ್ಕೆ ಮುತ್ತಿಗೆ ಹಾಕಲು ಬಂದನು. ಇದನ್ನು ಕಂಡ ದುರ್ಗದ ಮುಖಂಡರು, ಸರದಾರರು, ಸೇನಾಪತಿಗಳು, ಮನ್ಸಬ್ ದಾರರು ಮಹಾಸಭೆ ಸೇರಿ ಹೈದರನ ದಂಡು ಬಲವಾಗಿದೆ. ದುರ್ಗದ ಸೇನೆಯು ೫೦ ಸಾವಿರದ ಮಟ್ಟಿಗೆ ಇದ್ದು, ಮದಕರಿನಾಯಕನ ವಯಸ್ಸು ಚಿಕ್ಕದು, ಹೈದರಾಲಿಯ ವಿರುದ್ಧ ಯುದ್ಧಕ್ಕೆ ನಿಲ್ಲಲು ದಕ್ಷರೂ ಕಡಿಮೆ. ಆದಕಾರಣ ವಾರ್ಷಿಕ ಒಂದು ಲಕ್ಷ ರೂಗಳನ್ನು ಕೊಡುವುದರ ಮೂಲಕ ಹೈದರನನ್ನು ತಡೆದರು. ಇದಕ್ಕೆ ಒಪ್ಪಿದ ಹೈದರನು ಹಿಂತಿರುಗಿ ಬಂದು ಬಂಕಾಪುರದ ಕೋಟೆಗೆ ಮುತ್ತಿಗೆ ಹಾಕಿದರೂ ಜಯಲಭಿಸಲಿಲ್ಲ. ತದನಂತರ ದುರ್ಗದವರ ಸಹಾಯದಿಂದ ಬಂಕಾಪುರವನ್ನು ಜಯಿಸಿದನು. ಈ ವೇಳೆಗೆ ಶ್ರೀಮಂತ ಮಾಧವರಾಯ ಹೈದರನ ಕೇಂದ್ರ ಪ್ರದೇಶವಾದ ಶ್ರೀರಂಗಪಟ್ಟಣದ ಮೇಲೆ ಹಾಗೂ ಹೈದರನು ಇಕ್ಕೇರಿ ಮತ್ತು ನಿಜಗಲ್ಲು ಕೋಟೆಯ ಮೇಲೆ ಆಕ್ರಮಣ ಮಾಡಿದಾಗಲೂ, ದುರ್ಗದವರು ಸಹಾಯ ನೀಡಿ ಹೈದರನಿಗೆ ಜಯ ತಂದಿದ್ದರು. ಆದರೂ ದುರ್ಗದವರ ಈ ಪರಾಕ್ರಮವನ್ನು ಕಂಡರೂ ಹೈದರನು ಅವರ ಬಗ್ಗೆ ಅಸೂಯೆ ಪಟ್ಟು ಅವರನ್ನು ತಿರಸ್ಕರಿಸಿದನು.

ಕ್ರಿ.ಶ.೧೭೭೭ರಲ್ಲಿ ಮರಾಠರ ನಿಜಾಂ ಅಲಿಯು ಹೈದರ್‌ನ ಮೇಲೆ ಆಕ್ರಮಣ ನಡೆಸಿದನು. ಇದನ್ನು ಕಂಡ ದುರ್ಗದ ಪಾಳೆಯಗಾರ ಹೈದರನ ಅವನತಿ ಆರಂಭವಾಯಿತೆಂದು ಭಾವಿಸಿ, ಹೈದರನಿಗೆ ಸೈನಿಕ ನೆರವು ನೀಡದೆ ಭ್ರಾಂತಿಯಿಂದ ಇದ್ದನು. ಈ ಆಕ್ರಮಣವನ್ನು ಸಮರ್ಥವಾಗಿ ಎದುರಿಸಿದ ಹೈದರ್ ದುರ್ಗದ ಪಾಳೆಯಗಾರನನ್ನು ಬಂಧಿಸಲು ಸೈನ್ಯ ಸಮೇತ ಹೊರಟನು. ಆದರೆ ಹಲವಾರು ತಿಂಗಳುಗಳ ಕಾಲ ಹೋರಾಟ ನಡೆಸಿದರೂ ಕೂಡಾ ಕೋಟೆ ವಶವಾಗುವ ಸಾಧ್ಯತೆ ಕಂಡುಬರಲಿಲ್ಲ. ಆದ್ದರಿಂದ ಈ ಸಂದರ್ಭದಲ್ಲಿ ಸಂಧಿ ಅನಿವಾರ್ಯವಾಯಿತು. ಇದಕ್ಕೆ ಪರಿಹಾರವಾಗಿ ೧೩ ಲಕ್ಷ ವರಹಗಳನ್ನು

ಚಿತ್ರದುರ್ಗದ ನಾಯಕನು ನೀಡಬೇಕೆಂದು ನಿಶ್ಚಯವಾಯಿತು. ಈ ವೇಳೆಗೆ ಮರಾಠರು ಮತ್ತು ಹೈದರನಿಗೆ ಯುದ್ಧ ಆರಂಭವಾಗಲಾಗಿ ಯುದ್ಧದ ಪರಿಣಾಮವನ್ನು ನೋಡಲು ದುರ್ಗದ ನಾಯಕನು ಮತ್ತೆ ಕಾದುಕುಳಿತನು. ವಿಜಯಿಯಾದ ಹೈದರನ ಕಣ್ಣು ಪುನರಪಿ ಚಿತ್ರದುರ್ಗದ ಮೇಲೆ ಬಿದ್ದಿತು. ನಂತರ ಹೈದರಾಲಿಯು ಬೃಹತ್ ಸೈನ್ಯದೊಂದಿಗೆ ಚಿತ್ರದುರ್ಗಕ್ಕೆ ಮುತ್ತಿಗೆ ಹಾಕಿದನು. ದುರ್ಗದ ಸೇನೆಯಲ್ಲಿದ್ದ ಮಹಮದೀಯರ ವಂಚನೆಯಿಂದ ಚಿತ್ರದುರ್ಗ ಕ್ರಿ.ಶ.೧೭೭೯ರಲ್ಲಿ ಹೈದರನ ವಶವಾಯಿತು. ಬೇಡ ಸಮುದಾಯವು ದುರ್ಗದ ನಾಯಕನಿಗೆ ನಿಷ್ಠೆಯಿಂದಿರುವುದನ್ನು ಕಂಡು, ಹೈದರನು ಅವನ ಒಗ್ಗಟ್ಟನ್ನು ಮುರಿಯುವ ದೃಷ್ಟಿಯಿಂದ ಸುಮಾರು ೨೦,೦೦೦ ಸೈನಿಕರನ್ನು ಶ್ರೀರಂಗಪಟ್ಟಣಕ್ಕೆ ಸ್ಥಳಾಂತರಿಸಿದನು. ಹೀಗೆ ಹೈದರಾಲಿಯು ತುಂಗಭದ್ರಾ ನದಿಯಿಂದ ಕೃಷ್ಣಾನದಿಯವರೆಗಿನ ಸಮಸ್ತ ರಾಜ್ಯವನ್ನು ಅಂಗೈನೆಲ್ಲಿಯಾಗಿ ಮಾಡಿಕೊಂಡನು. ಕೊನೆಗೂ ಚಿತ್ರದುರ್ಗವಾದರೂ ಹೈದರಾಲಿಯ ಆಟೋಪಕ್ಕೆ ತಲೆಬಾಗಲೇಬೇಕಾಯಿತು.[೪೫]

ಬಿದನೂರು ಸಂಸ್ಥಾನ ಕ್ರಿ.ಶ.೧೭೬೩ರಲ್ಲಿ ನವಾಬರ ಕೈವಶವಾಗಲಾಗಿ ರಾಣಿ ವೀರಮ್ಮಳು ಗಾಬರಿಯಾಗಿ ತನ್ನ ಜಿಂದಗಿಯೆಲ್ಲಾ ವಂದು ಹವೇಲಿಯಲ್ಲಿ ಹಾಕಿ ಬೆಂಕಿ ಹಾಕುವಂತೆ ಹೇಳಿ ಜನಗಳ ಯಿಟ್ಟು, ನಂಬೆಯ್ಯ ಸಹ ಸ್ವಲ್ಪ ಫವುಜುನಿಂದಾ ಹೊಸ ಅಂಗಡೀ ಘಾಟಿಯಲ್ಲಿಳಿದು ಬಳ್ಳಾಳದುರ್ಗಕ್ಕೆ ವೋಡಿ ಹೋಗಿ ದಾಖಲಾದಳೂ. ನವಾಬರ ಕಳಮಾರ್ಗ ಮಾಸೂರರು ಹಾದಿಯಲ್ಲಿ ಬಿದಲೂರು ಷಹರು ಹೊಕ್ಕರು. ಆ ಬಳಿಕ ಬಿದಲೂರಿಗೆ 'ಹೈದರ್ ನಗರ'ವೆಂದು ಹೆಸರಿಟ್ಟು ತಾಲ್ಲೂಕು ಮೇಲೂ ಶೀಮೆಗಡಿ ಗಳು ಘಟ್ಟದ ಕೆಳಗಣ ಶೀಮೆ ಕೋಡಿಯಾಲ ಮುಂತಾದ ಫವುಜ ಬಂದೋಬಸ್ತು ಮಾಡಿದರು.[೪೬] ಎಂದು 'ಹೈದರ್ ನಾಮ'ದಲ್ಲಿ ಉಲ್ಲೇಖಿಸಲಾಗಿದೆ.

ಹೈದರಾಲಿಯು ಮಧುಗಿರಿಯ ಮೇಲೆ ಮುತ್ತಿಗೆ ಹಾಕಿ ಜಯಿಸಿದ ಮೇಲೆ ಕೋಟೆ ಕೊತ್ತಲಗಳನ್ನು ಬಲಪಡಿಸಿದನು. ನೇಕಾರರಿಗಷ್ಟೆ ಸೀಮಿತವಾಗಿದ್ದ ಈ ಪ್ರದೇಶವನ್ನು ಅಭಿವೃದ್ಧಿಯತ್ತ ಕೊಂಡೊಯ್ಯಲು ಅದನ್ನು ವ್ಯಾಪಾರ ಕೇಂದ್ರವಾಗಿ ಮಾರ್ಪಡಿಸಿದನು. ನಂತರ ಈ ನಗರ ಕ್ರಿ.ಶ.೧೭೬೭ ರಿಂದ ೭ ವರ್ಷಗಳ ಕಾಲ ಮರಾಠರ ಮಾಧವರಾಯನ ಅಧೀನದಲ್ಲಿತ್ತು. ನಂತರ ಟಿಪ್ಪುಸುಲ್ತಾನನು ಮಧುಗಿರಿಗೆ 'ಫತ್ತೇಹಾಬಾದ್' ಎಂದು ಹೆಸರಿಟ್ಟು ಅದನ್ನು ಪ್ರಾಂತ್ಯದ ರಾಜಧಾನಿಯನ್ನಾಗಿ ಮಾಡಿಕೊಂಡು ಆರು ಲಕ್ಷ ವರಹ ಕಂದಾಯ ಬರುವಂತೆ ಮಾಡಿದನು. ಇದರಿಂದ ಮಧುಗಿರಿಯ ಸಂಪತ್ತು ಖಾಲಿಯಾಗಿ ನಗರ ಬಹುಬೇಗ ಬಡವಾಯಿತು. ಜರಿಮಲೆ ಇಮ್ಮಡಿ ನಾಯಕನನ್ನು ಕ್ರಿ.ಶ.೧೭೭೭ರಲ್ಲಿ ಹೈದರ್ ಆಕ್ರಮಿಸಿದಾಗ ಜರಿಮಲೆಯವರು ದುರ್ಗದ ಪರವಾಗಿದ್ದರು. ದುರ್ಗದ ಮದಕರಿನಾಯಕ ಸೋಲಲಾಗಿ ಜರಿಮಲೆಯವರಿಗೆ ಮರಳಿ ಅಧಿಕಾರ ನೀಡಿದ ಹೈದರ್ ಅವರಿಂದ ವಾರ್ಷಿಕವಾಗಿ ೩೦೦೦ ಪಗೋಡಗಳನ್ನು ಗಳಿಸುತ್ತಿದ್ದನು. ಕ್ರಿ.ಶ.೧೭೮೦ರಲ್ಲಿ ಪಾಲ್ಗಾಟಿನ ಮೇಲೆ ದಾಳಿ ಮಾಡಿದ ಸಂದರ್ಭದಲ್ಲಿ ಬೊಮ್ಮಣ್ಣನಾಯಕ ೧೦೦೦ ಕಾಲಾಳು, ೧೦೦ ಅಶ್ವಗಳೊಂದಿಗೆ ಹೈದರಿನಿಗೆ ಸಹಾಯ ನೀಡಿ ಹೈದರನೊಂಧಿಗೆ ಆತ್ಮೀಯತೆ ವೃದ್ಧಿಸಿಕೊಂಡನು.[೪೭]

ಹೈದರನ ನಂತರ ಜರಿಮಲೆ ಟಿಪ್ಪುವಿನ ವಶವಾಗಲಾಗಿ ಸ್ನೇಹಿತರಾದ ಇವರಲ್ಲಿ ಅಪನಂಬಿಕೆಗಳು ಉಂಟಾದವು. ಇದಕ್ಕೆ ಕಾರಣ ಜರಿಮಲೆ ನಾಯಕರನ್ನು ಇಸ್ಲಾಂ ಧರ್ಮಕ್ಕೆ ಮತಾಂತರಿಸುವ ಪ್ರಯತ್ನ ಟಿಪ್ಪುವಿನದಾಗಿತ್ತು ಎನ್ನಬಹುದು. ಕ್ರಿ.ಶ.೧೭೮೨ರ ವೇಳೆಗೆ ಟಿಪ್ಪು ಮರಾಠರಿಂದ ಸೋತಾಗ ೨೦,೦೦೦ ಖಂಡಣಿ ಹಣವನ್ನು ಮರಾಠರಿಗೆ ನೀಡಿ ಜರಿಮಲೆಯನ್ನು ಮರಳಿ ಪಡೆದನು. ನಂತರ ಜರಿಮಲೆ ಕೋಟೆಯನ್ನು ಭದ್ರಪಡಿಸಿಕೊಂಡು ಇವರ ಸಹಾಯದಿಂದ ಮುಂದೆ ಚಿತ್ರದುರ್ಗದ ಮೇಲೆ ಆಕ್ರಮಣ ಮಾಡಿದನು.

ಹೀಗೆ ಹೈದರ್ ಮತ್ತು ಟಿಪ್ಪು ಚಿತ್ರದುರ್ಗದವರ ವಿರುದ್ಧ ಮತ್ತೆ ಮತ್ತೆ ಬಂಡೇಳಲು ಜನಾಂಗೀಯ ದ್ವೇಷವೂ ಕೂಡಾ ಇರಬಹುದು. ಮತ್ತೊಂದು ಮೂಲದ ಪ್ರಕಾರ ಚಿತ್ರದುರ್ಗದ ಅರಸರಲ್ಲೊಬ್ಬ ಹೈದರಾಲಿ ಸಂಬಂಧಿಯ ಹೆಣ್ಣನ್ನು ಅಪಹರಿಸಿದ್ದರಿಂದ ಮತ್ತು ಉಜ್ಜೈನಿ ಸ್ವಾಮಿಗಳ ಉಪದೇಶ ತಿರಸ್ಕರಿಸಿದ್ದರಿಂದ ರಾಜನಿಗೆ ಅವರು ತನ್ನ ದರ್ಶನಕ್ಕೆ ವಂಶಪಾರಂಪರ್ಯವಾಗಿ ಯಾರೂ ಬರಕೂಡದೆಂದು ಶಾಪಕೊಟ್ಟರು[೪೯] ಎಂಬ ಪ್ರತೀತಿ ಇದೆ.

ಹೈದರನ ಅವಧಿಯಲ್ಲಿ ಮೈಸೂರು ರಾಜ್ಯ ೮೦,೦೦೦ ಚದುರ ಮೈಲಿ ವಿಶಾಲವಾಗಿದ್ದಿತು. ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಸಿರಾ, ಹರಪನಹಳ್ಳಿ, ಬಳ್ಳಾರಿ, ರಾಯದುರ್ಗ ಮೊದಲಾದ ಅನೇಕ ಚಿಕ್ಕ ಸಂಸ್ಥಾನಗಳನ್ನು ಕೊನೆಗಾಣಿಸಿ, ಅವೆಲ್ಲವುಗಳನ್ನು ಒಂದು ಶಕ್ತಿಯುತ ರಾಜ್ಯವಾಗುವಂತೆ ಕೂಡಿಸಿ ಕರ್ನಾಟಕವನ್ನು ನಿರ್ಮಿಸಿದ ಶ್ರೇಯಸ್ಸು ಹೈದರನದೆ. ಇದರಿಂದ ಸುತ್ತ-ಮುತ್ತಲ ಕಂದಾಯವು ೪೩ ಲಕ್ಷ ವರಹಗಳಿಂದ ೧೧೦ ಲಕ್ಷ ರೂಪಾಯಿಗಳಿಗೆ ಏರಿತು. ಸಹಜವಾದ ಸಾಮರ್ಥ್ಯ ಹಾಗೂ ಮುತ್ಸದ್ಧಿತನ ಇವುಗಳಿಂದ ಎಲ್ಲಾ ವ್ಯವಹಾರಗಳನ್ನು ಸುಲಭವಾಗಿ ಬಗೆಹರಿಸುವ ಶಕ್ತಿ ಹೈದರನಿಗಿದ್ದಿತು ಎಂದು ಶ್ಯಾಮರಾವ್ ನುಡಿದಿರುವರು. ಒಬ್ಬ ಯೋಧನಾಗಿ, ಸಂಘಟಕನಾಗಿ, ಆಡಳಿತಗಾರನಾಗಿ, ರಾಜಕಾರಣಿಯಾಗಿ ಕರ್ನಾಟಕದ ಇತಿಹಾಸದಲ್ಲಿ ಉನ್ನತ ಸ್ಥಾನವನ್ನು ಅವನು ಪಡೆದಿದ್ದನು. ಉಜ್ವಲ ಮುಸ್ಲಿಮ್ ಧರ್ಮಾಭಿಮಾನಿಯಾಗಿದ್ದರೂ ಧರ್ಮವು ರಾಜಕೀಯದಲ್ಲಿ ಎಂದಿಗೂ ಅಡ್ಡಬರದಂತೆ ನೋಡಿಕೊಳ್ಳುತ್ತಿದ್ದನು.

ಹೀಗೆ ಸಿರಾವನ್ನು ಪುನಃ ಟಿಪ್ಪು ಸುಲ್ತಾನನು ಕ್ರಿ.ಶ.೧೭೭೪ರಲ್ಲಿ ಮರಾಠರಿಂದ ಗೆದ್ದುಕೊಂಡು ಮೈಸೂರಿನಲ್ಲಿ ವಿಲೀನಗೊಳಿಸಿಕೊಂಡನು. ಈ ಸಮಯದಲ್ಲಿ ಗಂಜಾಂ ನಗರವನ್ನು ವಿಸ್ತರಿಸುವ ಉದ್ದೇಶವನ್ನಿಟ್ಟುಕೊಂಡು ಸಿರಾದಿಂದ ೧೨ ಸಾವಿರ ಸಂಸಾರಗಳನ್ನು ಬಲವಂತದಿಂದ ಶ್ರೀರಂಗಪಟ್ಟಣಕ್ಕೆ ಸಾಗಿಸಿದನು. ಈ ಗಲಭೆಗಳಿಂದ ಮತ್ತು ಮರಾಠರ ದಾಳಿಗೆ ಸಿಕ್ಕ ಸಿರಾವು ೫೦,೦೦೦ ಮನೆಗಳಿಂದ ಕೇವಲ ೩೦೦೦ ಮನೆಗಳಿಗೆ ಇಳಿಯಿತು. ಹೀಗೆ ಸಿರಾವು ಮರಾಠ ಮತ್ತು ಟಿಪ್ಪು ಸುಲ್ತಾನರ ಅಧೀನದಲ್ಲಿ ಅಭಿವೃದ್ಧಿಯ ಜೊತೆಗೆ ಸಾಕಷ್ಟು ನಷ್ಟವನ್ನು ಅನುಭವಿಸಿತು. ಕ್ರಿ.ಶ.೧೭೯೯ರ ನಾಲ್ಕನೇ ಮೈಸೂರು ಯುದ್ಧದಲ್ಲಿ ಟಿಪ್ಪು ಹತನಾದಾಗ, ಸಿರಾವು ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಅಧೀನಕ್ಕೆ ಸೇರಿ ಹೋಯಿತು.

ಅಡಿಟಿಪ್ಪಣಿ

೧. ಸೈಯದ್ ಅಜಂ., 'ಸಿರಾದ ಸುಬೇದಾರರು'(ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಸಂ: ವಸು ಎಂ.ವಿ.), ೨೦೦೧, ಪು.೧೯೨

೨. ಶ್ರೀನಿವಾಸ ಎಂ.ವಿ. ಲಕ್ಷ್ಮಣ್ ತೆಲಗಾವಿ., (ಸಂ), ಚಂದ್ರವಳ್ಳಿ, ೧೯೭೫, ಪು.೯೦

೩. ಸೈಯದ್ ಅಜಂ., ಪೂರ್ವೋಕ್ತ, ೨೦೦೧, ಪು.೧೯೨

೪. ಶ್ರೀನಿವಾಸ್ ಎಂ.ವಿ. ಲಕ್ಷ್ಮಣ್ ತೆಲಗಾವಿ., ಪೂರ್ವೋಕ್ತ, ೧೯೭೫, ಪು.೯೧

೫. ರಾಮೇಗೌಡ., ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು, ೧೯೯೨, ಪು.೩೦೫

೬. ಪ್ರಭಾಕರ್ ಎಂ.ಎನ್., 'ಸಿರಾದ ಪಾಳೆಯಗಾರರು', (ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಸಂ: ವಸು ಎಂ.ವಿ.), ೨೦೦೧, ಪು.೧೮೯

೭. ಸೈಯದ್ ಅಜಂ., ಪೂರ್ವೋಕ್ತ, ೨೦೦೧, ಪು.೧೯೪

೮. ರಾಮೇಗೌಡ., ಪೂರ್ವೋಕ್ತ, ೧೯೯೨, ಪು.೩೦೪

೯. ಅದೇ, ಪು.೩೫೫

೧೦. ಸುಂದರ್ ರಾವ್ ಬ.ನ., ಬೆಂಗಳೂರಿನ ಇತಿಹಾಸ, ೧೯೮೫, ಪು.೫೦

೧೧. ಮುದ್ದಾಚಾರಿ ಬಿ., ಮೈಸೂರು ಮರಾಠರ ಬಾಂಧವ್ಯ, ೧೯೫೦, ಪು.೪೬

೧೨. ಅದೇ, ಪು.೫೮, ೫೭, ೬೨

೧೩. ಸೈಯದ್ ಅಜಂ., ಪೂರ್ವೋಕ್ತ, ೨೦೦೧, ಪು.೧೯೬

೧೪. ಮುದ್ದಾಚಾರಿ ಬಿ., ಪೂರ್ವೋಕ್ತ ೧೯೫೦, ಪು.೨೨

೧೫. ರಾಮಾಶಾಸ್ತ್ರಿ ಆರ್., (ಸಂ), ಕಂಠೀರವ ನರಸರಾಜ ವಿಜಯ, ೧೯೭೧, ಪು.೨೦೮, ಸಂಧಿ.೧೧

೧೬. ಸುಂದರ್ ರಾವ್ ಬ.ನ., ಪೂರ್ವೋಕ್ತ, ೧೯೮೫, ಪು.೫೨

೧೭. ಮುದ್ದಾಚಾರಿ ಬಿ., ಪೂರ್ವೋಕ್ತ, ೧೯೫೦, ಪು.೩೨, ೫೦

೧೮. ಅದೇ, ಪು.೭೬, ೮೩

೧೯. ಅದೇ, ಪು.೬೭

೨೦. ಶ್ರೀನಿವಾಸ್ ಎಂ.ವಿ. ಲಕ್ಷ್ಮಣ್ ತೆಲಗಾವಿ.,(ಸಂ), ಪೂರ್ವೋಕ್ತ, ೧೯೭೫, ಪು.೯೧, ೧೦೦

೨೧. ಮುದ್ದಾಚಾರಿ ಬಿ., ಪೂರ್ವೋಕ್ತ, ೧೯೫೦, ಪು.೧೧೯, ೧೨೨

೨೨. ಅದೇ, ಪು.೧೫೩, ೧೫೮

೨೩. ಅದೇ, ಪು.೧೬೧, ೧೬೪

೨೪. ಕೊರಟಿ ಶ್ರೀನಿವಾಸರಾವ್., ಇರಾವತಿ, ೧೯೭೭, ಪು.೯೮

೨೫. ವಸು ಎಂ.ವಿ., ದಕ್ಷಿಣ ಕರ್ನಾಟಕದ ಅರಸು ಮನೆಗಳು, ೨೦೦೧, ಪು.೫೭

೨೬. ಕೃಷ್ಣರಾವ್ ಎಂ.ವಿ. ಕೇಶವಭಟ್ಟ ಎಂ., (ಸಂ), ಕರ್ನಾಟಕ ಇತಿಹಾಸ ದರ್ಶನ, ೧೯೭೯, ಪು.೫೨೩, ೫೩೫

೨೭. ದೀಕ್ಷಿತ್ ಜಿ.ಎಸ್., 'ದೊಡ್ಡೇರಿಯ ಕಾಳಗ', (ಶ್ರೀಕಂಠ ತೀರ್ಥ, ಸಂ: ಚಿದಾನಂದಮೂರ್ತಿ ಎಂ., ಮತ್ತಿತರು), ೧೯೭೬, ಪು.೬೩೪

೨೮. ಲಕ್ಷ್ಮಣ್ ತೆಲಗಾವಿ., (ಸಂ), ಚರಿತ್ರೆ ಅಧ್ಯಯನ, ಸಂಪುಟ ೧, ಸಂಚಿಕೆ ೧, ೨೦೦೫, ಪು.೧೩೧

೨೯. ಕೊರಟಿ ಶ್ರೀನಿವಾಸರಾವ್., ಪೂರ್ವೋಕ್ತ, ೧೯೭೭, ಪು.೧೦೩

೩೦. ಪುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳೆಯಗಾರರು, ೧೯೯೭, ಪು.೫೩

೩೧. ದೀಕ್ಷಿತ್ ಜಿ.ಎಸ್., ಪೂರ್ವೋಕ್ತ, ೧೯೭೬, ಪು.೬೩೫

೩೨. ಕಲಬುರ್ಗಿ ಎಂ.ಎಂ., ಕರ್ನಾಟಕದ ಕೈಫಿಯತ್ತುಗಳು, ೧೯೯೯, ಪು.೪೧೮

೩೩. ಮುದ್ದಾಚಾರಿ ಬಿ., ಪೂರ್ವೋಕ್ತ, ೧೯೫೦, ಪು.೧೯೨, ೨೪೭

೩೪. ಸುಬ್ಬರಾವ್ ತ.ರಾ., ವಿಜಯೋತ್ಸವ, ೧೯೯೮, ಸಾರಾಂಶ

೩೫. ದಿವಾಕರ ರಂ.ರಾ.,(ಸಂ), ಕರ್ನಾಟಕ ಪರಂಪರೆ ಸಂಪುಟ ೨, ೧೯೭೦, ಪು.೨೪೧

೩೬. ಪುಟ್ಟಣ್ಣ ಎಂ.ಎಸ್., ಪೂರ್ವೋಕ್ತ, ೧೯೯೭, ಪು.೫೩

೩೭. ಕಲಬುರ್ಗಿ ಎಂ.ಎಂ., (ಸಂ), ಪೂರ್ವೋಕ್ತ, ೧೯೯೪, ಪು.೨೦೭

೩೮. ಕೃಷ್ಣರಾವ್ ಎಂ.ವಿ. ಕೇಶವಭಟ್ಟ ಎಂ.,(ಸಂ), ಪೂರ್ವೋಕ್ತ,೧೯೭೮, ಪು.೫೪೫

೩೯. ಕಲ್ಲಾಪುರ ಜೆ.ವಿ., 'ಕೆಳದಿ ಇತಿಹಾಸದಲ್ಲಿ ಮೈಸೂರು ಅರಸರು', (ಇತಿಹಾಸ ದರ್ಶನ-೯), ೧೯೯೪, ಪು.೧೬೦

೪೦. ಲಕ್ಷ್ಮಣ್ ತೆಲಗಾವಿ. ಶ್ರೀನಿವಾಸ್ ಎಂ.ವಿ.,(ಸಂ), ಐತಿಹಾಸಿಕ ಲೇಖನಗಳು, ೧೯೭೬, ಪು.೮೧

೪೧. ಮೊಹಿಬ್ಬುಲ್ ಹಸನ್., 'ಟಿಪ್ಪುಸುಲ್ತಾನನ ಇತಿಹಾಸ', (ಅನು : ರಾಮರಾಯ ಸಮೇತನ ಹಳ್ಳಿ), ೧೯೮೮, ಪು.೫

೪೨. ಕೊರಟಿ ಶ್ರೀನಿವಾಸರಾವ್., ಬೆಂಗಳೂರಿನ ಭಾಗ್ಯ, ೨೦೦೪, ಪು.೪೯, ೫೨

೪೩. ಯೋಗೀಶ್ವರಪ್ಪ ಡಿ.ಎನ್., ಹಾಗಲವಾಡಿಯ ನಾಯಕರು, ೧೯೯೯, ಪು.೪೪, ೪೫

೪೪. ಷೇಕ್ ಅಲಿ ಬಿ.,(ಪ್ರ.ಸಂ), ಕರ್ನಾಟಕ ಚರಿತ್ರೆ ಸಂಪುಟ-೫, ೧೯೯೭, ಪು.೫೪, ೫೫

೪೫. ಕೃಷ್ಣರಾವ್ ಎಂ.ವಿ. ಕೇಶವಭಟ್ಟ ಎಂ.,(ಸಂ), ಪೂರ್ವೋಕ್ತ, ೧೯೭೯, ಪು.೪೭೧

೪೬. ಶರ್ಮಾ ತೀ.ತಾ., ಚಾರಿತ್ರಿಕ ದಾಖಲೆಗಳು, ೧೯೭೧, ಪು.೫೭

೪೭. ವಿರೂಪಾಕ್ಷಿ ಪೂಜಾರಹಳ್ಳಿ., ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ೨೦೦೪, ಪು.೩೯

೪೮. ಷಡಕ್ಷರಯ್ಯ ರು.ಮ., ಉಜ್ಜೈನಿ ಸದ್ಧರ್ಮ ಪೀಠದ ಸಾಂಸ್ಕೃತಿಕ ಅಧ್ಯಯನ, ೨೦೦೩, ಪು.೨೩೧

## ಅಧ್ಯಾಯ-೪

# ಸಿರಾದ ನವಾಬರ ಸಾಂಸ್ಕೃತಿಕ ಕೊಡುಗೆಗಳು

೪.೧. ಆಡಳಿತ ಪದ್ಧತಿ

೪.೨. ಕಲೆ ಮತ್ತು ವಾಸ್ತುಶಿಲ್ಪ

೪.೨.೧. ಮಲ್ಲಿಕ್ ರಿಹಾನ್ ದರ್ಗಾ

೪.೨.೨. ಜಾಮಿಯಾ ಮಸೀದಿ

೪.೨.೩. ರಾಗಿಕಲ್ಲು ಗೋರಿ

೪.೨.೪. ಚಿನ್ನದ ಗೋರಿ

೪.೨.೫. ಮೊಗಲ್ ಮಸ್ಜೀದ್

೪.೨.೬. ಹೆರಾರ್ ಮಸೀದಿ

೪.೨.೭. ಈದ್ಗಾ

೪.೨.೮. ಸಿರಾದ ಕೋಟೆ

# ಅಧ್ಯಾಯ-೪

# ಸಿರಾದ ನವಾಬರ ಸಾಂಸ್ಕೃತಿಕ ಕೊಡುಗೆಗಳು

## ೪.೧. ನವಾಬರ ಆಡಳಿತ ಪದ್ಧತಿ

ಸಿರಾ ಪ್ರದೇಶವು ಕರ್ನಾಟಕ-ಬಿಜಾಪುರ-ಬಾಲ್ಘಾಟ್ ಪ್ರದೇಶದಲ್ಲಿ ಆಯಕಟ್ಟಿನ ಸ್ಥಾನವನ್ನು ಹೊಂದಿತ್ತು. ೧೫೬೫ರ ತಾಳಿಕೋಟೆಯ ಯುದ್ಧಾನಂತರ ವಿಜಯನಗರ ಸಾಮ್ರಾಜ್ಯ ನಾಶವಾದರೂ, ಆದಿಲ್‌ಷಾಹಿಗಳು ವಿಜಯನಗರ ಸಾಮ್ರಾಜ್ಯದ ಅಧೀನ ಪ್ರದೇಶಗಳ ಮೇಲೆ ಹತೋಟಿ ಹೊಂದಲು ಒಂದು ಶತಮಾನವೇ ಬೇಕಾಯಿತು. ಆದಿಲ್‌ಷಾಹಿಗಳ ವಿಸ್ತರಣೆಗೆ ನಿರಂತರವಾಗಿ ಪಾಳೆಯಗಾರರು ತಡೆಯೊಡ್ಡಿದರು. ಆದರೂ ಬಿಜಾಪುರದ ನಾಯಕರು ದಕ್ಷಿಣ ಕರ್ನಾಟಕದ ಕೆಲವು ಪ್ರದೇಶಗಳನ್ನು ವಶಪಡಿಸಿಕೊಳ್ಳುವಲ್ಲಿ ಸಫಲರಾದರು. ಅಂತಹ ಪ್ರದೇಶಗಳಲ್ಲಿ ಒಂದಾದ ಸಿರಾ ಆಡಳಿತದ ಮೇಲ್ವಿಚಾರಣೆಯನ್ನು ಮಲ್ಲಿಕ್ ರಿಹಾನ್ ಎಂಬ ಸುಬೇದಾರ ವಹಿಸಿಕೊಂಡಿದ್ದನು. ಈತನು ಬಿಜಾಪುರದ ಆದಿಲ್‌ಷಾಹಿಗಳ ಅಧೀನವರ್ತಿಯಾಗಿ ಕಾರ್ಯನಿರ್ವಯಿಸುತ್ತಿದ್ದರಿಂದ ಹೆಚ್ಚಾಗಿ ಬಿಜಾಪುರ ಆಡಳಿತ ಪದ್ಧತಿಯನ್ನೇ ಅನುಸರಿಸುತ್ತಿದ್ದನು.

೧೬ನೆಯ ಶತಮಾನದಿಂದ ೧೮ನೆಯ ಶತಮಾನದವರೆಗೆ ಮೊಗಲರು ಆಳ್ವಿಕೆ ನಡೆಸಿದರು. ಇವರು ಬಿಜಾಪುರ ಮತ್ತು ಗೋಲ್ಕಂಡವನ್ನು ವಶಪಡಿಸಿಕೊಂಡ ನಂತರ ಕರ್ನಾಟಕ-ಬಿಜಾಪುರ-ಬಾಲ್ಘಾಟ್ ಪ್ರದೇಶಗಳಲ್ಲಿ ಒಂದಾದ ಸಿರಾಕ್ಕೆ ಸುಬೇದಾರರನ್ನು ನೇಮಕ ಮಾಡಿದರು. ಪ್ರಾಂತ್ಯಾಧಿಕಾರಿಗಳಾದ ಸುಬೇದಾರರು ಸಹ ಮೊಗಲರ ಆಡಳಿತ ಪದ್ಧತಿಯನ್ನು ಅನುಸರಿಸುತ್ತಿದ್ದರು.

ಒಟ್ಟಾರೆ ಬಿಜಾಪುರ ಮತ್ತು ಮೊಗಲರಿಂದ ನೇಮಕಗೊಂಡ ಮುಸ್ಲಿಮ್ ಅಧಿಕಾರಿಗಳಿಗೆ ನವಾಬ ಅಥವಾ ಸುಬೇದಾರರು ಎನ್ನಲಾಗಿತ್ತು. ಈ ಸುಬೇದಾರರು ಪ್ರಾಂತ್ಯಗಳ ಮೇಲಿನ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತು ಆಳ್ವಿಕೆ ನಡೆಸುತ್ತಿದ್ದರು. ಪ್ರಾಂತ್ಯಗಳನ್ನು ಅನೇಕ ಪರಗಣಗಳಾಗಿ ವಿಂಗಡಿಸಲಾಗಿತ್ತು. ಪ್ರತಿಯೊಂದು ಪರಗಣಗಳಲ್ಲೂ ಸಮತ್, ತರಫ್, ಮೌಜೆ, ಮುಜರೆ ಎಂಬ ಉಪ ವಿಭಾಗಗಳನ್ನು ರಚಿಸಿ ಅದರಲ್ಲಿ ಜಮಾದಾರ್ ಅಥವಾ ಸಂಗ್ರಹಕಾರರನ್ನು ನಿಯೋಜಿಸಿದರು. ಮರಾಠರು ದೇಶಪಾಂಡೆ, ದೇಶ ಕುಲಕರ್ಣಿ, ಸರ್.ನಾಡಗೌಡ, ದೇಶ ಮುಖಿ ಮತ್ತು ಕನಂಗೋ ಮೊದಲಾದ ಅಧಿಕಾರಿಗಳ ಮೂಲಕ ತೆರಿಗೆ ಸಂಗ್ರಹಿಸುತ್ತಿದ್ದರು. ಲೆಕ್ಕಾಧಿಕಾರವನ್ನು 'ಸಂಪ್ರತಿ' ಎಂಬ ಅಧಿಕಾರಿ

ನಿರ್ವಯಿಸಿದರೆ 'ಖಿನಂಗೋ' ಸುಗ್ರೀವಾಜ್ಞೆಗಳನ್ನು ಹೊರಡಿಸುತ್ತಿದ್ದನು. ಇವರು ಮೊದಲು ಆಡಳಿತದಲ್ಲಿ ಕನ್ನಡವನ್ನು ಬಳಸಿದರು. ಆದರೆ ನಂತರ ತಮ್ಮ ತಮ್ಮ ಭಾಷೆಗಳಲ್ಲಿ ಆಡಳಿತ ನಡೆಸುತ್ತಿದ್ದರು.[೧] ಈ ಅಧಿಕಾರಿಗಳಲ್ಲದೆ ಪ್ರಾಂತ್ಯಾಧಿಕಾರಿ, ಕಂದಾಯ ಮಂತ್ರಿ, ಗೂಢಾಚಾರ, ನಗರಾಧಿಕಾರಿ, ಗ್ರಾಮ ಮುಖಂಡ, ತಳವಾರ, ಶಾನುಭೋಗ ಮುಂತಾದ ಅಧೀನ ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದರು.

ಸಾಮಾಜಿಕವಾಗಿ ಹಿಂದೂ-ಮುಸ್ಲಿಮರಲ್ಲಿ ಸಾಮರಸ್ಯವಿತ್ತೆಂದು ಮಲ್ಲಿಕ್ ರಿಹಾನ್‌ನ ದರ್ಗಾದ ಧಾರ್ಮಿಕ ಆಚರಣೆಯ ಇಂದಿನ ಸ್ಥಿತಿಯಿಂದ ತಿಳಿದುಬರುವುದು. ಕೊರಟಿ ಶ್ರೀನಿವಾಸರಾವ್ ಅವರು ತಮ್ಮ ಕಾದಂಬರಿ 'ಇರಾವತಿ'ಯಲ್ಲಿ ಖಾಸಿಂಖಾನನು ಒಂದು ಬಡ ಕುಟುಂಬದ ಮಗುವಿನ ಸಾವಿಗೆ ಅನಿರೀಕ್ಷಿತವಾಗಿ ಕಾರಣನಾದನು. ಇದಕ್ಕೆ ಪ್ರಾಯಶ್ಚಿತ್ತವಾಗಿ ಗೋಪಾಲಕೃಷ್ಣಸ್ವಾಮಿ ದೇವಾಲಯಕ್ಕೆ ವರ್ಷಂಪ್ರತಿ ಧಾರ್ಮಿಕ ಆಚರಣೆಯು ನಡೆಯುವಂತೆ ದತ್ತಿ ನೀಡಿದನು[೨] ಎಂದಿದ್ದಾರೆ. ಇದರಿಂದ ಹಿಂದೂಗಳೊಂದಿಗೆ ಉತ್ತಮ ಸಾಮಾರಸ್ಯ ಹೊಂದಿದ್ದನೆಂದು ತಿಳಿಯುತ್ತದೆ.

ಮುಸಲ್ಮಾನ ದೊರೆ ದಿಲಾವರ್ ಖಾನನು ಯಾದಲಡಕು ಗ್ರಾಮವನ್ನು ಅದೇ ಗ್ರಾಮದ ರಂಗನಾಥ ದೇವಾಲಯ ನಿರ್ಮಾಣಕ್ಕೆ ಭೂಮಿದಾನ ಮಾಡಿದ ಉಲ್ಲೇಖವಿದೆ. ಈತನು ಮುಸ್ಲಿಮನಾದರೂ ಹಿಂದೂ ದೇವಾಲಯಗಳಿಗೆ ದಾನ ದತ್ತಿ ಕೊಡುವ ಸಂಪ್ರದಾಯವನ್ನು ಬೆಳೆಸಿಕೊಂಡಿದ್ದನು. ಇದೇ ರೀತಿ ಸೀಬಿಯ ನರಸಿಂಹಸ್ವಾಮಿ ದೇವಾಲಯಕ್ಕೆ ಹೈದರ್ ಆಲಿಯು ಭೂಮಿಯನ್ನು ಪುನರ್ ದತ್ತಿಯಾಗಿ ನೀಡುತ್ತಾನೆ. ಚಿಕ್ಕ ಸೀಬಿ ಮೊದಲು ದಂಡಕಾರಣ್ಯವಾಗಿತ್ತು. ಆ ಕಾಡನ್ನು ಕಡಿಸಿ ನಾಡು ಮಾಡಿ ಆ ಸ್ಥಳವು ಮೊದಲೇ ದೇವಾಲಯಕ್ಕೆ ಸೇರಿತ್ತೆಂದು ತಿಳಿದು, ಆ ಜಾಗವನ್ನು ಮತ್ತೆ ಅದೇ ದೇವಾಲಯಕ್ಕೆ ದಾನ ನೀಡುತ್ತಾನೆ.[೩] ಹೈದರಾಲಿಯು ಮತೀಯ ಸೂಕ್ಷ್ಮಾಂಶಗಳಿಗೆ ಹೆಚ್ಚು ಗಮನಕೊಡದೆ ಮತಸಹಿಷ್ಣು ಆಗಿದ್ದನು. ಇದರಿಂದ 'ಹೈದರಾನಾಮ'ದ ಕರ್ತೃ ನಲ್ಲಪ್ಪನು ಹೈದರನನ್ನು 'ದೈವ ಬ್ರಹ್ಮ ದ್ವೇಷ ರಹಿತ' ಅಂದರೆ ದೇವ ಬ್ರಾಹ್ಮಣರಲ್ಲಿ ದ್ವೇಷವಿಲ್ಲದವನು ಎಂದು ಕರೆದಿದ್ದಾನೆ. ರಾಜಕೀಯದಿಂದ ಜಾತೀಯತೆಯನ್ನು ಪ್ರತ್ಯೇಕಿಸಿದುದಲ್ಲದೆ ತನ್ನ ರಾಜ್ಯವನ್ನು ಜಾತ್ಯಾತೀತವನ್ನಾಗಿ ಮಾಡಿದನು.[೪]

ನಂತರ ಅಧಿಕಾರಕ್ಕೆ ಬಂದ ಟಿಪ್ಪು ಹಲವಾರು ಮುಸ್ಲಿಂ ದೊರೆಗಳ ಮಾದರಿಯನ್ನು ಅನುಸರಿಸಿ ಹಳೆಯ ಕ್ಷುದ್ರಧರ್ಮೀಯ ಹೆಸರುಗಳನ್ನು ಬದಲಾಯಿಸಿದ ಮಹಾವೀರನೂ ಆಗಿದ್ದನು, ನಂತರ ಅವುಗಳಿಗೆ ಮುಸ್ಲಿಮ್ ಮುದ್ರೆಯನ್ನು ಒತ್ತುವುದೇ ಅವನ ಉದ್ದೇಶವಾಗಿತ್ತು. ಉದಾ: ಬ್ರಹ್ಮಪುರಿಯನ್ನು ಸುಲ್ತಾನ್ ಪೇಟೆ, ಚಿತ್ರದುರ್ಗವನ್ನು ಫೌರುಖ್ -ಯಬ್ ಹಿಸ್ಸಾರ್, ಮೈಸೂರನ್ನು ನಜರಾಬಾದ್ ಮತ್ತು ಸಿರಾವನ್ನು ರುಸ್ತುಮಾಬಾದ್ ಎಂದು ಮರುನಾಮಕರಣ ಮಾಡಿದನು. ಆದರೆ ಟಿಪ್ಪುವಿನ ಮರಣಾನಂತರ ಈ ಇಸ್ಲಾಮೀ ಹೆಸರುಗಳು ಮರೆತು ಹೋಗಿ ಹಳೆಯ ಸಾಂಪ್ರದಾಯಿಕ ಹೆಸರುಗಳೇ ಉಳಿದುಕೊಂಡಿವೆ.[೫]

ಹಿಂದೂಗಳ ಹುಟ್ಟು ಹಬ್ಬ, ವಿವಾಹ, ಹೋಳಿ, ದೀಪಾವಳಿ, ದಸರಾ ಮೊದಲಾದ ಸಾರ್ವತ್ರಿಕ ಸಮಾರಂಭಗಳಲ್ಲಿ ಮುಸ್ಲಿಮರು ಭಾಗವಹಿಸುತ್ತಿದ್ದರು. ಸಾಮಾನ್ಯವಾಗಿ ಆಡಳಿತದ ಉನ್ನತ ಹುದ್ದೆಗಳು ಮುಸ್ಲಿಮರಿಗೆ ಮೀಸಲಾಗಿದ್ದವು. ಶ್ರೀಮಂತ ವರ್ಗದ ಮುಸ್ಲಿಮರು ಕಮೀಜ್ ಅಥವಾ ಅಂಗಿಗಳನ್ನು, ಟ್ರೊಜರ್ ಅಥವಾ ಪೈಜಾಮುಗಳನ್ನು ಧರಿಸುತ್ತಿದ್ದರು. ಮಹಿಳೆಯರು ಬಿಗಿಯಾದ ಪೈಜಾಮುಗಳನ್ನು ಮೇಲ್ಮುಸುಕುಗಳನ್ನು ತೊಡುತ್ತಿದ್ದರು.

ಕೃಷಿ ವ್ಯವಸ್ಥೆ ಉತ್ತಮವಾಗಿದ್ದು ಕೆಲವರು ಭೂದಾನ ಮತ್ತು ಜಹಗೀರುಗಳನ್ನು ಪಡೆದು ವ್ಯವಸಾಯ ಮಾಡುವುದರಲ್ಲಿ ನಿರತರಾಗಿದ್ದರು. ದಿಲಾವರ್ ಖಾನನು ಬಸವಾಪಟ್ಟಣದಲ್ಲಿ ಕೆರೆಯನ್ನು ಕಟ್ಟಿಸುವುದರ ಮೂಲಕ ಕೃಷಿಗೆ ಪ್ರೋತ್ಸಾಹ ನೀಡಿದ್ದನು. ಖಾಸಿಂಖಾನನ ಆಳ್ವಿಕೆಯ ಕಾಲದಲ್ಲಿ ಬೇಡರು ಮತ್ತು ಒಕ್ಕಲಿಗರು ಕೃಷಿಯನ್ನು ಅವಲಂಬಿಸಿದ್ದರು ಎಂದು 'ಇರಾವತಿ' ಗ್ರಂಥದಲ್ಲಿ ಕೊರಟಿ ಶ್ರೀನಿವಾಸ ರಾವ್ ರವರು ತಿಳಿಸಿದ್ದಾರೆ.

ಟಿಪ್ಪು ಸುಲ್ತಾನನು ೭೦೦ ಪಗೋಡಗಳನ್ನು ಖರ್ಚುಮಾಡಿ ಸಿರಾದಲ್ಲಿನ ಹಳೆಯ ಕೆರೆಯೊಂದನ್ನು ದುರಸ್ತಿ ಮಾಡಿಸಿದನು. ಆದರೆ ಮಳೆಯ ಕೊರತೆಯಿಂದಾಗಿ ಆ ಕೆರೆ ಎಂದೂ ಕೂಡ ತುಂಬಲಿಲ್ಲ. ಹೀಗೆ ಕೃಷಿಗೆ ಪೋತ್ಸಾಹ ನೀಡಿದರೂ ಸಹ ಜನಸಾಮಾನ್ಯರಿಗೆ ಉಪಯೋಗವಾಗಲಿಲ್ಲ.

ನವಾಬರ ಆಳ್ವಿಕೆಯ ಕಾಲದಲ್ಲಿ ಸಿರಾ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಜಾತಿ ವ್ಯವಸ್ಥೆ ಇದ್ದುದು ಕಂಡುಬರುತ್ತದೆ. ಮುಸಲ್ಮಾನರಲ್ಲಿ ಸುನ್ನಿಗಳು, ಹಿಂದೂಗಳಲ್ಲಿ ಒಕ್ಕಲಿಗರು, ಬೇಡರು, ಬ್ರಾಹ್ಮಣರು ಮುಂತಾದ ಜಾತಿಗಳು ಇದ್ದವು. ಬ್ರಾಹ್ಮಣರು ಉನ್ನತ ಸ್ಥಾನದಲ್ಲಿ ಇದ್ದರು. ವಿದ್ಯಾಭ್ಯಾಸವು ಸಂಸ್ಕೃತದಲ್ಲಿ ನಡೆಯುವುದರ ಜೊತೆಗೆ ಪರ್ಶಿಯನ್ ಉರ್ದು, ಅರಾಬಿಕ್ ಭಾಷೆಗಳಲ್ಲಿಯೂ ನಡೆಯುತ್ತಿದ್ದಿತು. ಸಾಮಾನ್ಯವಾಗಿ ಹಲವು ಜಾತಿಗಳ ಜನರ ಭಾಷೆ ಕನ್ನಡವಾಗಿತ್ತು. ಆದರೆ ಕೆಲವರು ತೆಲುಗು ಭಾಷೆಯನ್ನಾಡುತ್ತಿದ್ದರೆ, ಮುಸಲ್ಮಾನರು ಆಡುತ್ತಿದ್ದ ಭಾಷೆ ಉರ್ದು.

ಮಲ್ಲಿಕ್ ರಿಹಾನ್ ದರ್ಗಾದ ಹಿಂಬದಿಯಲ್ಲಿ ಒಂದು ಮಸೀದಿಯಿದ್ದು, ಇಲ್ಲಿ ಮಲ್ಲಿಕ್ ರಿಹಾನನು ಖುರಾನ್ ಗ್ರಂಥವನ್ನು ಓದುತ್ತಿದ್ದನೆಂದು ತಿಳಿದುಬರುತ್ತದೆ. ಇಂದು ಈ ಮಸೀದಿ 'ದಾರಾಲುಲುಂ ಮದ್ರಸ' ಎಂದು ಹೆಸರು ಪಡೆದಿದ್ದು, ಇಲ್ಲಿ ಕನ್ನಡ, ಉರ್ದು, ಇಂಗ್ಲೀಷ್ ಭಾಷೆಗಳಲ್ಲಿ ಶಿಕ್ಷಣ ನೀಡಲಾಗುತ್ತಿದೆ. ಇದು ನವಾಬರ ಕಾಲದಲ್ಲಿ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುತ್ತಿದ್ದರು ಎಂಬುದಕ್ಕೆ ಸಾಕ್ಷಿ.

ನ್ಯಾಯ ಪರಿಪಾಲನೆಯಲ್ಲಿ ಎಲ್ಲರೂ ಸಮಾನರಾಗಿದ್ದು, ನ್ಯಾಯ ವ್ಯವಸ್ಥೆ ಖುರಾನ್ ಮತ್ತು ಷರಿಯತ್ ಎಂಬ ಇಸ್ಲಾಂ ನ್ಯಾಯಶಾಸ್ತ್ರದ ಮೇಲೂ, ಹಿಂದೂ ಧರ್ಮಶಾಸ್ತ್ರದ ಆಧಾರದ ಮೇಲೂ ನಡೆಸಲಾಗುತ್ತಿತ್ತು. ಹಿಂದೂಗಳ ವಿಚಾರಣೆಗಳು ಹಿಂದೂ ಧರ್ಮಶಾಸ್ತ್ರಗಳನ್ನು, ಮುಸ್ಲಿಮರ ವಿಚಾರಣೆಗಳು

ಷರಿಯತ್‌ನ್ನು ಆಧರಿಸಿದ್ದವು. ಖಾಜಿಗಳು, ಕೊತ್ವಾಲರು, ಫೌಜುದಾರರು, ಪ್ರಾಂತ್ಯ, ನಗರ ಮತ್ತು ಗ್ರಾಮಗಳಲ್ಲಿ ನ್ಯಾಯ ವಿಚಾರಣೆ ಮಾಡುತ್ತಿದ್ದು ಶಿಕ್ಷೆಗಳು ಕಠಿಣವಾಗಿದ್ದವು.

ಪ್ರಾಂತ್ಯಾಧಿಕಾರಿಗಳು ವ್ಯವಸ್ಥಿತ ಸೈನ್ಯವನ್ನು ಹೊಂದಿದ್ದರು. ಆದರೂ ತುರ್ತು ಪರಿಸ್ಥಿತಿಯಲ್ಲಿ ಕೇಂದ್ರದಿಂದ ಸೈನ್ಯದ ಸರಬರಾಜು ನಡೆಯುತ್ತಿತ್ತು. ಹೊಸ ಸೈನಿಕರ ನೇಮಕ ಹಾಗೂ ಭದ್ರವಾದ ಕೋಟೆಗಳನ್ನು ನಿರ್ಮಾಣ ಮಾಡುವುದರ ಮೂಲಕ ಸೈನಿಕ ವ್ಯವಸ್ಥೆಯನ್ನು ಭದ್ರಪಡಿಸಿಕೊಂಡಿದ್ದರು. ನಂತರ ಅಪೂರ್ಣಗೊಂಡಿದ್ದ ಸಿರಾ ಕೋಟೆಯನ್ನು ಇವರು ಪೂರ್ಣಗೊಳಿಸಿ ನಿಡಗಲ್ಲು, ಬಳ್ಳಾರಿ ಮುಂತಾದ ಕೋಟೆಗಳನ್ನು ಹೈದರಾಲಿ ಪುನರುಜ್ಜೀವನಗೊಳಿಸಿದನು.

ರಾಜ್ಯಾದಾಯವು ವಶಪಡಿಸಿಕೊಂಡ ಪ್ರದೇಶಗಳಿಂದ ಕಪ್ಪಕಾಣಿಕೆಗಳನ್ನು ಪೊಗದಿ, ವರಹ, ಪಗೋಡಗಳನ್ನು ಪಡೆಯುವುದರ ಮೂಲಕ, ಜೊತೆಗೆ ಕಂದಾಯ ಮತ್ತು ಜಹಗೀರು ರೂಪದಲ್ಲಿ ಸಂಗ್ರಹವಾಗುತ್ತಿತ್ತು. ಕ್ರಿ.ಶ.೧೭೪೮ರ ಅವಧಿಯಲ್ಲಿ ಸಿರಾದ ನವಾಬರು ನಿಡಗಲ್ಲಿಗೆ ಮುತ್ತಿಗೆ ಹಾಕಿ ೩೦೦೦ ಪಗೋಡಗಳನ್ನು ಪಡೆದರು. ಅದೇ ರೀತಿ ಚಿತ್ರದುರ್ಗ, ರಾಯದುರ್ಗ, ಕೆಳದಿ, ಬಸವಾಪಟ್ಟಣ ಹೀಗೆ ಅನೇಕ ಪ್ರಾಂತ್ಯಗಳನ್ನು ಆಕ್ರಮಿಸುವುದರ ಮೂಲಕ ರಾಜ್ಯಾದಾಯವನ್ನು ಹೆಚ್ಚಿಸಿಕೊಳ್ಳುತ್ತಿದ್ದರು.

ನವಾಬರು ಸಂಗೀತ, ಸಾಹಿತ್ಯ ಹಾಗೂ ನೃತ್ಯಕಲೆಗೆ ಪ್ರೋತ್ಸಾಹ ನೀಡಿದ್ದರು ಎಂಬುದಕ್ಕೆ ಖಾಸಿಂಖಾನನು 'ಮೆಹರ್ ಬಾನು' ಎಂಬ ನೃತ್ಯಗಾರ್ತಿಯನ್ನು ಬಿಜಾಪುರದಿಂದ ಸಿರಾಕ್ಕೆ ಕರೆತಂದುದೇ ಉದಾಹರಣೆಯಾಗಿದೆ. ಹೀಗೆ ನವಾಬರು ಮೊಗಲರ ಅಧೀನದಲ್ಲಿದ್ದು, ಸಿರಾದಲ್ಲಿ ಉತ್ತಮ ಆಡಳಿತವನ್ನು ನಡೆಸಿದರು.

## ೪.೨. ಕಲೆ ಮತ್ತು ವಾಸ್ತುಶಿಲ್ಪ

ಇಸ್ಲಾಂ ಧರ್ಮ ಉತ್ಕರ್ಷಕ್ಕೆ ಬರುವ ಮುನ್ನವೇ ದಕ್ಷಿಣ ಭಾರತೀಯರು ಅರಬ್ಬರೊಡನೆ ಸಂಪರ್ಕವನ್ನಿಟ್ಟುಕೊಂಡಿದ್ದರು. ಅರಬ್ಬರು ಪಶ್ಚಿಮ ಕರಾವಳಿಗೆ ವ್ಯಾಪಾರಕ್ಕೆ ಭೇಟಿ ಕೊಡುತ್ತಿದ್ದುದಲ್ಲದೆ ಪರಸ್ಪರ ವಸ್ತುವಿನಿಮಯ ಪದ್ಧತಿಯನ್ನು ಅನುಸರಿಸುತ್ತಿದ್ದರು. ಏಕೆಂದರೆ ಅರಬ್ಬರ ಕುದುರೆಗಳಿಗೆ ದಕ್ಷಿಣದ ರಾಜ್ಯದಲ್ಲಿ ಬೇಡಿಕೆ ಇದ್ದಿತು. ೧೩ನೆಯ ಶತಮಾನದ ನಂತರ ಮುಸಲ್ಮಾನರು ದಕ್ಷಿಣಕ್ಕೆ ಬಂದಾಗ, ಜೊತೆಯಲ್ಲಿಯೇ ರಾಜಕೀಯ ಹಾಗೂ ಧರ್ಮಗಳು ಬಂದವು. ಈ ವೇಳೆಗೆ ಬಹಮನಿ ರಾಜ್ಯ ಉದಯವಾಗಿ, ಬಿಜಾಪುರದಲ್ಲಿ ಆದಿಲ್‌ಷಾಹಿಗಳು ರಾಜ್ಯವಾಳತೊಡಗಿದರು. ಮೊದಲು ಬಹಮನಿಗಳು ಒಟ್ಟಾಗಿದ್ದಾಗ ಗುಲ್ಬರ್ಗಾ, ಬೀದರ್‌ಗಳಲ್ಲಿ ಹಾಗೂ ಮುಸ್ಲಿಮ್ ಮತೀಯ ಧಾರ್ಮಿಕ ಕಟ್ಟಡಗಳಲ್ಲಿ ಮಹಮದೀಯ ಧರ್ಮವು ಅನುಮತಿ ನೀಡಿದಂತಹ ಸುಳಿವುಗಳನ್ನು ರಚಿಸಿರುವುದು ಉಳಿದುಬಂದಿದೆ. ನಂತರ ಬೀದರ್‌ನಿಂದ 'ಚಿಕಣಿ' ಚಿತ್ರಗಳು ಬರಲಿಲ್ಲವಾದರೂ ಅವು ಬಿಜಾಪುರದಿಂದ ಬಂದವು.

ಇದಲ್ಲದೆ ಅಹಮದ್‌ನಗರ ಹಾಗೂ ಗೋಲ್ಕಂಡದಿಂದಲೂ ಇಂತಹ ಚಿತ್ರಗಳು ರಚಿತವಾಗಿದ್ದವು. ಈ ಬಗೆಯ ಚಿಕಣಿ ಚಿತ್ರಗಳೇ 'ದಖನಿ ಚಿತ್ರಕಲೆ'.

ಅಕ್ಬರನಿಗೂ ಮೊದಲೇ ಪರ್ಶಿಯಾದಿಂದ ಪ್ರಭಾವಿತವಾಗಿ ಕಾಣಿಸಿಕೊಂಡ 'ದಖನಿ ಚಿತ್ರ' ಬಿಜಾಪುರದಲ್ಲಿ ನೆಲೆಕಂಡು ಅನೇಕ ಚಿತ್ರಗಳು ರಚನೆಯಾಗಿ, ಮೊಗಲ್ ಆಸ್ಥಾನಕ್ಕೆ ಹೋಯಿತು. ಆ ವೇಳೆಗೆ ಅಲ್ಲಿಗೂ ಪರ್ಶಿಯಾದ ಚಿತ್ರಗಳು ಬಂದಿದ್ದು ಸ್ಥಳೀಯ ಕಲಾವಿದರು ದೇಶೀಯ ಶೈಲಿಯೊಂದಿಗೆ ಬೆರೆಸಿ, ಭಾರತೀಯ-ಮಹಮದೀಯ(ಇಂಡೋ-ಇಸ್ಲಾಮಿಕ್) ಕಲಾ ಪ್ರಕಾರವೊಂದನ್ನು ಆವಿಷ್ಕರಿಸಿದರು. ಮುಂದೆ ಈ ಚಿತ್ರಗಳು ದಖನಿಯರ ಮೇಲೆ ಗಾಢವಾದ ಪ್ರಭಾವ ಬೀರಿದವು.[೬]

ನಮ್ಮ ಕರ್ನಾಟಕ ರಾಜ್ಯವು ಸರ್ವಧರ್ಮಗಳ ನೆಲೆ ಬೀಡಾಗಿರುವುದು ಒಂದು ಸಂತೋಷದ ವಿಚಾರ. ಕರ್ನಾಟಕದಲ್ಲಿ ಹಲವು ಧರ್ಮಗಳು, ಸಂಸ್ಕೃತಿಗಳು ಹಾಗೆಯೇ ಕಲೆ ವಾಸ್ತುಶಿಲ್ಪ ಹೀಗೆ ಎಲ್ಲವುಗಳಲ್ಲಿಯೂ ಒಂದಲ್ಲ ಒಂದು ರೀತಿಯ ವೈವಿಧ್ಯತೆಯಿಂದ ಕೂಡಿದೆ ಎಂಬುದರಲ್ಲಿ ಸಂಶಯವಿಲ್ಲ. ಹಾಗೆಯೇ ತುಮಕೂರು ಜಿಲ್ಲೆ ಇದರಿಂದ ಹೊರತಾಗಿಲ್ಲ. ಈ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಿಗಿಂತ ಸಿರಾ ತಾಲ್ಲೂಕು ಹೆಚ್ಚು ವೈವಿಧ್ಯತೆಯಿಂದ ಕೂಡಿದೆ. ಈ ಜಿಲ್ಲೆಯ ಬೇರಾವುದೇ ತಾಲ್ಲೂಕಿನಲ್ಲಿರದ ವೈವಿಧ್ಯಮಯ ವೈಶಿಷ್ಟ್ಯಗಳು ಸಿರಾದಲ್ಲಿರುವುದು ಹೆಮ್ಮೆಯ ವಿಷಯ.

ಸಿರಾ ತಾಲ್ಲೂಕು ಅನೇಕ ವಿಧವಾದ ಕಲೆ ಮತ್ತು ವಾಸ್ತುಶಿಲ್ಪ, ಜಾನಪದ ಕಲೆ, ಸ್ಮಾರಕಗಳು, ಐತಿಹಾಸಿಕ ಪರಂಪರೆ ಅನೇಕ ದೇವಾಲಯಗಳು, ಚರ್ಚ್ ಹಾಗೆಯೇ ಮುಸ್ಲಿಮ್ ವಾಸ್ತುಶಿಲ್ಪದ ಮಸೀದಿಗಳು, ದರ್ಗಾಗಳು, ಹೀಗೆ ಅನೇಕ ವಿಧವಾದ ಸಾಂಸ್ಕೃತಿಕ ಛಾಪನ್ನು ತನ್ನಲ್ಲುಳಿಸಿಕೊಂಡಿದೆ.

ಸಿರಾ ತಾಲ್ಲೂಕಿನಲ್ಲಿದ್ದ ಮಸೀದಿಗಳ ಸಂಖ್ಯೆ ಸುಮಾರು ೨೦ ರಿಂದ ೩೦, ಈಗ ಸುಮಾರು ೧೫ ರಿಂದ ೨೦ ಮಸೀದಿಗಳಾದರೂ ಇವೆ. ಆದರೆ ಇವುಗಳಲ್ಲಿ ಜನಾಂಗದ ಕಾರ್ಯ ನಿರ್ವಹಿಸುತ್ತಿರುವ ಮಸೀದಿಗಳು ಸುಮಾರು ೬ ರಿಂದ ೭ ಮಾತ್ರ. ಇದಕ್ಕೂ ಹಿಂದೆ ಅಂದರೆ ಇತಿಹಾಸದ ಕಾಲದಲ್ಲಿ ಸಿರಾ ನಗರದಲ್ಲಿಯೇ ೫೨ ಮಸೀದಿಗಳು, ೫೨ ದರ್ಗಾಗಳು ಇದ್ದವೆಂದು ಪೂರ್ವಿಕರು ತಿಳಿಸುತ್ತಾರೆ. ಇದಕ್ಕೆ ಪುಷ್ಟಿ ನೀಡುವಂತೆ ಸುಮಾರು ದಿನಗಳ ಹಿಂದೆ ಕೋಟೆಯ ಹಿಂಭಾಗದಲ್ಲಿ ಒಂದು ಮಸೀದಿ ದೊರೆತಿದೆ. ಆದರೆ ಇದರ ಉತ್ಖನನ ಕಾರ್ಯ ಮುಂದುವರಿಯದೇ ಇರುವುದು ವಿಷಾದನೀಯ ಸಂಗತಿ.

ಸಿರಾದಲ್ಲಿ ಇತಿಹಾಸ ಪ್ರಸಿದ್ಧ ಮಸೀದಿಗಳು, ದರ್ಗಾಗಳು ಇವೆ. ಅವುಗಳೆಂದರೆ ಜಾಮಿಯಾ, ಮಸೀದಿ, ಮೊಗಲ್ ಮಸ್ಜೀದ್, ಅಹಲ್ ಆದೀಸ್, ಬೇಗಂ ಮಸೀದಿ, ಹೆರಾರ್ ಮಸೀದಿ, ನೂರಲ್ ಹಸನ್ ಮಸೀದಿ, ಮಲ್ಲಿಕ್ ರಿಹಾನ್ ದರ್ಗಾ, ಚಿನ್ನದ ಗೋರಿ, ಬರಾಕಿ ಮಸೀದಿ, ಈದ್ಗಾ ಇವು ಸಿರಾದಲ್ಲಿನ ಇತಿಹಾಸ ಪ್ರಸಿದ್ಧ ಮುಸ್ಲಿಮ್ ವಾಸ್ತುಶಿಲ್ಪದ ಕುರುಹುಗಳು.

ಸಿರಾ ತಾಲ್ಲೂಕಿನಾದ್ಯಂತ ನೋಡಿದಾಗ ಕೇವಲ ಎರಡು ಸ್ಥಳಗಳಲ್ಲಿ ಮಾತ್ರ ಇತಿಹಾಸ ಪ್ರಸಿದ್ಧವಾದ ಮಸೀದಿಗಳಿವೆ. ಅವುಗಳೆಂದರೆ ಗಂಡೀಹಳ್ಳಿ ಮಠ ಮತ್ತು ಹೋಜುಗುಂಟೆ. ಆದರೆ ಇವುಗಳ ಬಗ್ಗೆ ಸರಿಯಾದ ಆಧಾರಗಳು ದೊರೆತಿಲ್ಲ. ಗಂಡೀಹಳ್ಳಿಯಲ್ಲಿ ಇತ್ತೀಚೆಗೆ, ಅಂದರೆ ಹಳೆಯ ಮಸೀದಿಯು ಬಿದ್ದು ಹೋಗಿರುವುದರಿಂದ ಆ ಜಾಗದಲ್ಲಿ ನವೀನ ಮಸೀದಿಯನ್ನು ಕಟ್ಟಿದ್ದಾರೆ. ಆದರೆ ಇದರಲ್ಲಿ ಹೆಚ್ಚಿನ ವಾಸ್ತುಶಿಲ್ಪದ ರಚನೆಯೇನೂ ಕಂಡುಬಂದಿಲ್ಲ. ಹೋಜುಗುಂಟೆಯ ಹತ್ತಿರವಿರುವ ದರ್ಗಾ ಪುರಾತನವಾದದ್ದಾದರೂ ಅದಕ್ಕೆ ಯಾವ ಪುರಾವೆಯೂ ಸಂಬಂಧಪಟ್ಟವರಲ್ಲಿ ವಿಚಾರಿಸಿದಾಗ ಸಿಗದೇ ಇರುವುದು ವಿಷಾದನೀಯ. ಆದ್ದರಿಂದ ಇದರ ಇತಿಹಾಸ ಅಲಭ್ಯವಾಗಿದೆ.

### ೪.೨.೧. ಮಲ್ಲಿಕ್ ರಿಹಾನ್ ದರ್ಗಾ

ಸಿರಾದಲ್ಲಿ ಬಿಜಾಪುರದ ವಾಸ್ತುಶಿಲ್ಪ ಶೈಲಿಯನ್ನು ಹೊಂದಿರುವ ಈ ಮಲ್ಲಿಕ್ ರಿಹಾನ್ ದರ್ಗಾ ನೋಡುಗರ ಕಣ್ಮನ ಸೆಳೆಯುವಂತಿದೆ. ಇದನ್ನು ಕಟ್ಟಿರುವ ಶಿಲ್ಪಕಲೆಯ ವಿನ್ಯಾಸ ನಯನ ಮನೋಹರವಾಗಿದೆ. ಇದು ಹಿಂದೂ-ಮುಸ್ಲಿಮ್ ಉಭಯ ಧರ್ಮಗಳ ಭಾವೈಕ್ಯತಾ ನೆಲೆಯಾಗಿ ನಿಂತಿದೆ. ಈ ಮಲ್ಲಿಕ್ ರಿಹಾನ್ ದರ್ಗಾ ಕೇಂದ್ರ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟಿದ್ದು, ಸಂಪೂರ್ಣ ಕಲ್ಲಿನ ಕಟ್ಟಡವಾಗಿದೆ. ಇದರ ಆಸುಪಾಸಿನಲ್ಲಿ ಅನೇಕ ಗೋರಿಗಳಿದ್ದು, ಈ ಗೋರಿಗಳಲ್ಲಿ ಔರಂಗಜೇಬನ ಮಗಳಾದ 'ಗೌಹಾರ್ ತಾಜ್'ಳ ಗೋರಿಯೂ ಒಂದಾಗಿದೆ.[೭]

ಈ ದರ್ಗಾದ ಹಿಂದಿನ ಇತಿಹಾಸ ಅಲ್ಲಿನ 'ಮುಜಾವರ್' ಹೇಳುವ ಕಥೆಗೂ ಮತ್ತು ಕರ್ನಾಟಕ ಇತಿಹಾಸವನ್ನು ನೋಡಿದಾಗ ಸಿಗುವ ಮಾಹಿತಿಗೂ ಬಹಳ ವ್ಯತ್ಯಾಸ ಕಂಡುಬರುತ್ತದೆ. ಮುಜಾವರ್ ಹೇಳುವ ಕಥೆಯಂತೆ, "ಮಲ್ಲಿಕ್ ರಿಹಾನ್ ಎಂಬ ವ್ಯಕ್ತಿ ಸಿರಾದಲ್ಲಿ ರಾಜ್ಯಪಾಲನಾಗಿದ್ದನು. ಈ ವ್ಯಕ್ತಿ ಕಾಲಕ್ರಮೇಣ ಲೌಕಿಕ ಜೀವನದಲ್ಲಿ ಬೇಸರ ಹೊಂದಿ ಆ ಹುದ್ದೆಯನ್ನು ಬಿಟ್ಟು ಬಂದನು. ಅನಂತರ ಆತನ ಕೈಕೆಳಗಿದ್ದ ಸೈನಿಕರು ಆತನ ಹಿಂದೆಯೇ ಬಂದರು. ರಿಹಾನನೊಂದಿಗೆ ಹಲವು ಸೈನಿಕರು ಪ್ರೀತಿ ವಿಶ್ವಾಸದಿಂದ ಇದ್ದುದರಿಂದ ಅವನ ಜ್ಞಾಪಕಾರ್ಥ ಕುರುಹನ್ನು ಬಯಸಿದರು. ಆಗ ರಿಹಾನನು ತನ್ನ ಬಳಿ ಇದ್ದ ಒಂದು ಶ್ವೇತಾಶ್ವವನ್ನು ಮುಂದೆ ಬಿಟ್ಟು, ಆ ಅಶ್ವ ಎಲ್ಲಿ ನಿಲ್ಲುತ್ತದೆಯೋ ಅದೇ ಸ್ಥಳವೇ ನನ್ನ ನೆಲೆ ಎಂದು ಆತನ ಹಿಂಬಾಲಕರಿಗೆ ಹೇಳಿ ಆ ಕುದುರೆಯನ್ನು ಬಿಟ್ಟು ಅದರ ಹಿಂದೆಯೇ ಬಂದರು. ನಂತರ ಆ ಕುದುರೆ ಈಗ ದರ್ಗಾವಿರುವ ಸ್ಥಳದಲ್ಲಿ ಬಂದು ನಿಂತಿತು. ಆಗ ಆ ಜಾಗವೇ ನನ್ನ ನೆಲೆ ಎಂದು ಹೇಳಿ ಆ ಸ್ಥಳದಲ್ಲಿ ಈ ದರ್ಗಾವನ್ನು ಕಟ್ಟಿಸಿದನು" ಎಂದು ಈಗಿರುವ ಮುಜಾವರ್ ಹೇಳುತ್ತಾರೆ.[೮]

ಮಲ್ಲಿಕ್ ರಿಹಾನ್ ದರ್ಗಾದಲ್ಲಿರುವ ಸಮಾಧಿಯ ಹೆಸರು 'ಹಜರತ್ ಮಲ್ಲಿಕ್ ರೆಹಾನ್ ಪಾಷಾ' ಎಂಬ ವ್ಯಕ್ತಿಯದು. ಆದ್ದರಿಂದ ಇದನ್ನು ಕಟ್ಟಿಸಿದವನು ಮಲ್ಲಿಕ್ ರಿಹಾನನೇ ಎಂದು ಹೇಳಬಹುದು.

**ವಾಸ್ತುಶಿಲ್ಪ :** ಬಿಜಾಪುರ ಸುಲ್ತಾನನ ಅಧೀನ ನವಾಬ ಮಲ್ಲಿಕ್‌ರಿಹಾನನ ಕಾಲದಲ್ಲಿ ನಿರ್ಮಿತವಾದ ಈ ದರ್ಗಾ ಭಾಗಶಃ ಬಿಜಾಪುರದಲ್ಲಿರುವ ಮಸೀದಿಗಳ ಶೈಲಿಯನ್ನೇ ಹೋಲುತ್ತದೆ. ಇದೇ ಅಂಶಕ್ಕೆ ಪುಷ್ಟಿ ನೀಡುವ ಮತ್ತೊಂದು ಅಂಶವೆಂದರೆ, ಬಿಜಾಪುರದಲ್ಲಿರುವ ಗೋಳಗುಮ್ಮಟವನ್ನು ಮತ್ತು ಇಬ್ರಾಹಿಂ ರೋಜಾವನ್ನು ಇದೇ ಸಮಯದಲ್ಲಿ ಕಟ್ಟಿರುವುದು ಕಂಡುಬರುತ್ತದೆ. ಅಂದರೆ ಗೋಳಗುಮ್ಮಟದ ಕಾಲ ಕ್ರಿ.ಶ.೧೬೨೯-೧೬೫೬ ಮತ್ತು ಇಬ್ರಾಹಿಂ ರೋಜಾದ ಕಾಲ ಕ್ರಿ.ಶ.೧೬೨೬. ಆದ್ದರಿಂದ ಈ ದರ್ಗಾದ ಕಾಲವೂ ಸಹ ಕ್ರಿ.ಶ.೧೬೩೮ ರಿಂದ ೧೬೫೦ ಆಗಿರುವುದರಿಂದ ನೋಡಲು ಸ್ವಲ್ಪ ವ್ಯತ್ಯಾಸಗಳು ಕಂಡರೂ ಅದೇ ಮಾದರಿಯದು ಎಂದರೆ ತಪ್ಪಾಗಲಾರದು.

ಸುಮಾರು ೨-೩ ಅಡಿಗಳ ಕಲ್ಲಿನ ಕಟ್ಟಡದ ಮೇಲೆ ರಚಿತವಾಗಿರುವ ಈ ಕಲಾಕೃತಿ ಬಹಳ ಸುಂದರವಾಗಿದೆ. ಇದರ ಒಟ್ಟು ಎತ್ತರ ೪೦ ಅಡಿಗಳು. ಹಾಗೆಯೇ ಇದರ ಕಮಾನುಗಳು ನೋಡಲು ಆಕರ್ಷಕವಾಗಿದೆ. ಮೇಲ್ಭಾವಣಿಯಲ್ಲಿ ಕೆತ್ತಿರುವ ವಿವಿಧ ರೀತಿಯ ಬಳ್ಳಿಗಳು ಮತ್ತು ಹೂಗಳು ನಯನ ಮನೋಹರವಾಗಿವೆ. ಕಟ್ಟಡದ ಮೇಲ್ಭಾಗದಲ್ಲಿ ನಾಲ್ಕು ಮೂಲೆಗೂ ಅಷ್ಟೇನೂ ಉದ್ದವಲ್ಲದ ಪಾರ್ಸೀ ಶೈಲಿಯಲ್ಲಿ ನಿರ್ಮಿತವಾದ ನಾಲ್ಕು ಸ್ಥಂಭಗಳಿವೆ. ಮಧ್ಯ ಭಾಗದಲ್ಲಿ ಎಂಟು ಅಡಿ ಎತ್ತರವಾಗಿರುವ ಹೂವಿನಾಕಾರದ ಒಂದು ಗುಮ್ಮಟವಿದೆ. ದರ್ಗಾದ ಒಳಗಡೆ ಮಧ್ಯಭಾಗದಲ್ಲಿ ದೈವಾಂಶ ಸಂಭೂತ ಮಲ್ಲಿಕ್ ರಿಹಾನನ ಗೋರಿಯಿದೆ. ದರ್ಗಾದ ನಾಲ್ಕು ದಿಕ್ಕುಗಳಲ್ಲೂ ಅರ್ಧ ವೃತ್ತಾಕಾರದ ಮನಮೋಹಕ ಕಮಾನುಗಳಿವೆ. ಈ ವೇಳೆಯಲ್ಲಿ ಬಿಜಾಪುರದಿಂದ ಕಲ್ಲುಗಳು ಮತ್ತು ಶಿಲ್ಪಗಳನ್ನು ತಂದು ಈ ದರ್ಗಾವನ್ನು ನಿರ್ಮಿಸಲಾಗಿದೆ.

**ಹಿಂದೂ - ಮುಸ್ಲಿಮ್ ಭಾವೈಕ್ಯದ ಪ್ರತೀಕ :** ಮಲ್ಲಿಕ್ ರಿಹಾನ್ ದರ್ಗಾವು ಒಂದು ರೀತಿಯ ಉಭಯ ಧರ್ಮಗಳ ಭಾವೈಕ್ಯತೆಯ ಪ್ರತೀಕವಾಗಿದೆ. ಈ ದರ್ಗಾಕ್ಕೆ ಹಿಂದೂ-ಮುಸ್ಲಿಮ್ ಎರಡೂ ಧರ್ಮದ ಜನ ಪೂಜೆ ಪುನಸ್ಕಾರಗಳನ್ನು ಮಾಡುತ್ತಾರೆ. "ಈಶ್ವರ ಅಲ್ಲಾ ತೇರಾನಾಮ್ ಸಬ್ ಕೋ ಸನ್ಮತಿ ದೇ ಭಗವಾನ್" ಎಂಬ ತತ್ವಾಧಾರಿತ ದೈವಿಕ ಸಿದ್ಧಾಂತ ಸಮಗ್ರವಾಗಿ, ಸಮಕಾಲೀನವಾಗಿ ಅಕ್ಷರಶಃ ಇಲ್ಲಿ ಪಾಲನೆಯಾಗುತ್ತಿದೆ. ಈ ದರ್ಗಾದಲ್ಲಿ ಪ್ರತಿ ಶುಕ್ರವಾರ ವಿಶೇಷ ಪೂಜೆ ನಡೆಯುತ್ತದೆ. ಇಂದು ಇಲ್ಲಿ ಇಂಥಹ ಧರ್ಮದವರೇ ಎಂದು ಹೇಳದೆ ಪ್ರತಿ ಧರ್ಮದವರು ವಿಶೇಷ ಪೂಜೆಯಲ್ಲಿ ಪಾಲ್ಗೊಳ್ಳುತ್ತಾರೆ. ಪ್ರಮುಖವಾಗಿ ಸಕ್ಕರೆ ಮತ್ತು ಲಡ್ಡು ಪ್ರಸಾದವಾಗಿ ಗೋರಿಯ ಹತ್ತಿರವಿಟ್ಟು ಮುಜಾವರ್ ಪಾತೇಹ ಮಾಡಿ ಭಕ್ತಾದಿಗಳಿಗೆ ಹಿಂದಿರುಗಿಸುತ್ತಾರೆ. ಊದಬತ್ತಿ, ಸಾಂಬ್ರಾಣಿ ಧೂಪದ ಪರಿಮಳ ಭಕ್ತಾದಿಗಳನ್ನು ಭಕ್ತಿ ಪರವಶರನ್ನಾಗಿ ಮಾಡಿಬಿಡುತ್ತದೆ. ಪ್ರತಿವರ್ಷ ಉರುಸ್(ಜಾತ್ರೆ) ಜರುಗುತ್ತದೆ. ಉರುಸ್‌ಗೆ ಈ ಹಿಂದೆ ಮೈಸೂರು ಸಂಸ್ಥಾನದಿಂದ ಮಲ್ಲಿಕ್ ರಿಹಾನನ ಗೋರಿಗೆ ಹೊದಿಸಲು ಹೊಸ ವಸ್ತ್ರವನ್ನು ಕಳುಹಿಸುತ್ತಿದ್ದರಂತೆ. ಆದರೆ ಕ್ರಮೇಣ ಈ ಪದ್ಧತಿ ಕಾಲನ ಭೀತಿಗೆ ಶರಣಾಗಿ ಹೋಗಿದೆ. ಈಗ ಇಲ್ಲಿನವರೇ ನೂತನ ವಸ್ತ್ರ ಹೊದಿಸಿ ಪೂಜೆ ಸಲ್ಲಿಸುತ್ತಾರೆ. ಭಕ್ತಾದಿಗಳು

ತಮ್ಮ ಮನಸ್ಸಿನಲ್ಲಿಯೇ ಬಹುವಿಧವಾಗಿ ಹರಕೆಯನ್ನು ಮಾಡಿಕೊಂಡು, ಕಷ್ಟ ದುಃಖಗಳು ಪರಿಹಾರವಾಗುವುದೆಂಬ ನಂಬಿಕೆಯಿಂದ ಉರುಳುಸೇವೆ ಮಾಡುತ್ತಾರೆ. ಜೊತೆಗೆ ಭೂತ ಪ್ರೇತಗಳನ್ನು ಓಡಿಸುವ ಶಕ್ತಿ ಈ ಸಮಾಧಿಗಿದೆ ಎಂಬುದು ಇಲ್ಲಿಯ ಜನರ ನಂಬಿಕೆ. ಹೀಗೆ ಮುಸ್ಲಿಮರು ಇದನ್ನು 'ಮಲ್ಲಿಕ ರಿಹಾನ್ ದರ್ಗಾ' ಎಂದರೆ ಹಿಂದೂಗಳು 'ಮಲ್ಲಿಕ್ ರಾಯನ ದರ್ಗಾ' ಎನ್ನುವುದು ಒಂದು ವಿಶೇಷ ಸಂಗತಿ.[೧೦]

### ೪.೨.೨. ಜಾಮಿಯಾ ಮಸೀದಿ

ಜಾಮಿಯಾ ಮಸೀದಿ ಅಂದರೆ ಸಾರ್ವಜನಿಕರು ಕೂಡಿ ಪ್ರಾರ್ಥಿಸುವ ಮಂದಿರ. 'ಜುಮ್ಮಾ' ಅಂದರೆ ಶುಕ್ರವಾರ ಈ ಮಸೀದಿಯಲ್ಲಿ ಖುತ್ಬಾ ಪಠಿಸುತ್ತಿದ್ದರಿಂದ 'ಜುಮ್ಮಾ ಮಸೀದಿ'ಯೆಂಬ ಹೆಸರು ಬಂದಿದೆ.[೧೧] ಮುಸ್ಲಿಮರ ಧಾರ್ಮಿಕ ಕಟ್ಟಡಗಳಲ್ಲಿ ಬಹಳ ಮುಖ್ಯವಾದವುಗಳೆಂದರೆ ಮಸೀದಿಗಳು ಮತ್ತು ಗೋರಿಗಳು. ಇಸ್ಲಾಂ ಧರ್ಮ ಸ್ಥಾಪಕರು ಅರೇಬಿಯಾದ ಮದೀನದಲ್ಲಿ ವಾಸಿಸುತ್ತಿದ್ದ ಮನೆಯ ವಿಸ್ತೃತ ರೂಪವೇ ಮಸೀದಿಯ ಕಲ್ಪನೆಗೆ ಮೂಲವೆಂಬ ಅಭಿಪ್ರಾಯವಿದೆ. ಹೀಗೆ ಅಪೂರ್ವ ಮಾದರಿಯ ಕಲಾ ಕೌಶಲ್ಯವನ್ನು ಹೊಂದಿರುವ ಮಸೀದಿಯೆಂದರೆ ಸಿರಾದ ಜಾಮಿಯಾ ಮಸೀದಿ. ಇದು ಅತ್ಯಂತ ಸುಂದರ ಕಲೆಯ ಮಾದರಿಯನ್ನು ಹೊಂದಿದ್ದು, ಇದಕ್ಕೆ ಸರಿಸಮನಾದ ಬೇರೊಂದು ಮಸೀದಿಯಿಲ್ಲ. ಈ ಮಸೀದಿ ದೆಹಲಿಯ ಜಾಮಿಯಾ ಮಸೀದಿಯ ಮಾದರಿಯಲ್ಲಿಯೇ ಇದೆ. ದೆಹಲಿಯ ಜಾಮಿಯಾ ಮಸೀದಿ ದೊಡ್ಡದಾಗಿದ್ದು ಸಿರಾದ ಮಸೀದಿ ಅದಕ್ಕಿಂತ ಚಿಕ್ಕದು. ಆದರೆ ದೆಹಲಿಯ ಜಾಮಿಯಾ ಮಸೀದಿ ಯಾವ ವಿನ್ಯಾಸವನ್ನು ಹೊಂದಿದೆಯೋ ಅದೇ ಕಲೆಯ ವಿನ್ಯಾಸವನ್ನೇ ಈ ಮಸೀದಿಯೂ ಹೊಂದಿದೆ.

ಸಿರಾ ಪ್ರಾಂತ್ಯವನ್ನು ಬಿಜಾಪುರ ಸುಲ್ತಾನನು ಆಳುತ್ತಿದ್ದ ಸಂದರ್ಭದಲ್ಲಿ ಉತ್ತರ ಭಾರತದಲ್ಲಿ ಅದ್ವಿತೀಯನಾಗಿದ್ದ ಮೊಗಲ್ ಚಕ್ರಾಧಿಪತಿ ಔರಂಗಜೇಬನು ಕ್ರಿ.ಶ.೧೬೮೭ರಲ್ಲಿ ದಂಡೆತ್ತಿ ಬಂದನು. ಈತನ ಪ್ರಾಂತ್ಯಾಧಿಕಾರಿಯಾದ ಖಾಸಿಂಖಾನನ ಆಡಳಿತಾವಧಿಯಲ್ಲಿಯೇ ಈ ಇತಿಹಾಸ ಪ್ರಸಿದ್ಧ ಜಾಮಿಯಾ ಮಸೀದಿಯನ್ನು ಕಟ್ಟಿಸಿದನೆಂದು ಇತಿಹಾಸದ ಮೂಲಗಳು ತಿಳಿಸುತ್ತವೆ. ಅಂದರೆ ಈ ಮಸೀದಿಯನ್ನು ಕ್ರಿ.ಶ.೧೬೯೬ರಲ್ಲಿ ಕಟ್ಟಿದೆ ಎಂದು ಹೇಳಲಾಗಿದೆ. ಇದರ ತಾಂತ್ರಿಕ ರಚನೆ ಮಾಡಿದ ವ್ಯಕ್ತಿಯೆಂದರೆ ಷೇಕ್ ಪರೀದ್ ಮತ್ತು ಶೇಖ್ ಕಬೀರ್‌ದಾಸರು. ಕಬೀರ್ ಸಾಹೇಬನು ತನ್ನ ಅಣ್ಣ ಫರೀದ್ ಸಾಹೇಬನ ಜ್ಞಾಪಕಾರ್ಥದಲ್ಲಿ ಅವನ ಸಮಾಧಿಯನ್ನು ಮಸೀದಿಯ ಸಮೀಪದಲ್ಲೇ ನಿರ್ಮಿಸಿದನು. ಇವು ಸಾರ್ಸೆನಿಕ್ ಶೈಲಿಯಲ್ಲಿ ನಿರ್ಮಿಸಿದ ಸುಲ್ತಾನರ ಪ್ರಾರ್ಥನಾ ಮಂದಿರಗಳಾಗಿವೆ.[೧೨]

ವಾಸ್ತುಶಿಲ್ಪದ ದೃಷ್ಟಿಯಿಂದ ಈ ಮಸೀದಿ ಅದ್ವಿತೀಯವಾದುದು. ಈ ವಾಸ್ತುಶಿಲ್ಪ ಮೊಗಲ್ ಶೈಲಿಯಲ್ಲಿರಬಹುದೆಂದು ಇಲ್ಲಿನ ಪೂರ್ವಿಕರು ಹೇಳುತ್ತಾರೆ. ಮಸೀದಿಯ ಬಹು ಮುಖ್ಯವಾದ ಭಾಗವೆಂದರೆ ಕಂಬಗಳಿಂದ ಕೂಡಿದ, ಕೈಸಾಲೆಯಿಂದ ಸುತ್ತುವರಿಯಲ್ಪಟ್ಟ, ವಿಸ್ತಾರವಾದ ಒಳ ಅಂಗಳ.

ಪ್ರಾರ್ಥನೆಯು ಯಾವ ಆವರಣವೂ ಇಲ್ಲದ ಬಯಲಿನಲ್ಲಿ ನಡೆಯುತ್ತದೆ. ಮಧ್ಯದಲ್ಲಿ ವಿಸ್ತಾರವಾದ ಅಂಗಳವನ್ನು ಬಿಟ್ಟು ಸುತ್ತಲೂ ಕಂಬಗಳನ್ನುಳ್ಳ ಕೈಸಾಲೆಗಳನ್ನು ಕಾಣಬಹುದು. ಪ್ರಾರ್ಥನೆಗೆ ಮುನ್ನ ಕೈಕಾಲು ತೊಳೆಯುವುದಕ್ಕಾಗಿ ಅಂಗಳದಲ್ಲಿ ಒಂದು ಕೊಳವಿದೆ. ಅನಂತರ ಈ ಕಟ್ಟಡದಲ್ಲಿ ಕೇಂದ್ರೀಕೃತ ಗುರಿಯನ್ನು ಸೂಚಿಸುವುದಕ್ಕಾಗಿ ಮೆಕ್ಕಾದ ಕಡೆಗಿರುವ ಕೈಸಾಲೆಗಳನ್ನು ಕಾಣಬಹುದು. ಮಂಟಪದ ಕೊನೆಯಲ್ಲಿ ಗೋಡೆ ಮತ್ತು ಅದರಲ್ಲಿ ಕಮಾನು ಗೂಡು ಇದೆ. ಪ್ರಾರ್ಥನೆಯ ದಿಕ್ಕನ್ನು ಸೂಚಿಸುವ ಇದನ್ನು 'ಮಿಹ್ರಾಬ್' ಎನ್ನುತ್ತಾರೆ. ಮಿಹ್ರಾಬ್‌ನ ಬಲಭಾಗದಲ್ಲಿ 'ಮಿಂಬರ್' ಎಂಬ ಎತ್ತರವಾದ ಉಪದೇಶದ ವೇದಿಕೆ ಇದೆ. ಈ ಮಂಟಪದ ಮುಂಭಾಗದಲ್ಲಿ ಒಂದು ಎತ್ತರವಾದ ವೇದಿಕೆಯಿದ್ದು, ಅದರ ಮೇಲೆ ನಿಂತು ಮುಸ್ಲಿಮ್ ಅನುಯಾಯಿಗಳನ್ನು ಪ್ರಾರ್ಥನೆಗೆ ಬರುವಂತೆ ಎಚ್ಚರಿಸುವ ವ್ಯವಸ್ಥೆ ಇದೆಂದು ಹೇಳಲಾಗಿದೆ. ಪ್ರಾರ್ಥನಾ ಮಂದಿರಕ್ಕೆ ಗಾಂಭೀರ್ಯವನ್ನು ತಂದು ಕೊಡುವುದಕ್ಕಾಗಿ ಆಕರ್ಷಕವಾದ ಮುಖದ್ವಾರ ಮತ್ತು 'ಮಿಹ್ರಾಬ್'ನ ಮೇಲೆ ಗೋಪುರಗಳು ನಿರ್ಮಾಣವಾದವು.[೧] ಈ ಮಸೀದಿ ಕಲ್ಲಿನ ಕಟ್ಟಡವಾಗಿದ್ದು, ಈ ಕಟ್ಟಡದ ಮೇಲ್ಭಾಗದಲ್ಲಿ ಮೂರು ಗುಮ್ಮಟಗಳಿವೆ. ಜುಮ್ಮಾ ಮಸೀದಿಯ ಗುಮ್ಮಟದ ತುದಿಯಲ್ಲಿ ಒಂದು ದೊಡ್ಡ ಕಲಶವಿದೆ. ಅದರ ಮೇಲೆ ಕಬ್ಬಿಣದಲ್ಲಿ ರಚಿಸಿರುವ ಅರ್ಧಚಂದ್ರನ ಆಕೃತಿಯಿದೆ. ಈ ಪ್ರಕಾರ ಅರ್ಧ ಚಂದ್ರನ ಆಕೃತಿಯನ್ನಿಟ್ಟಿರುವುದು ಆದಿಲ್ ಷಾಹಿಗಳು ತುರ್ಕಿಯ ಒತ್ತೊಮನ್ ಸುಲ್ತಾನರ ವಂಶಸ್ಥರೆಂಬುದನ್ನು ತೋರಿಸುತ್ತದೆ. ಇಂಥಹ ತ್ರಿಶೂಲವನ್ನು ಬಿಜಾಪುರದ ಮಿಹತರ್ ಮಹಲ್‌ನ ಮಸೀದಿಯಲ್ಲೂ ಕಾಣಬಹುದು. ಈ ಮಸೀದಿಯ ನಾಲ್ಕು ಕಡೆ ಉದ್ದನೆಯ ಸ್ಥಂಭಗಳಿವೆ. ಇಲ್ಲಿಯ ಪ್ರವೇಶದ್ವಾರವನ್ನು ಕರಿಕಲ್ಲಿನಲ್ಲಿ ಕಡೆದು ನಿಲ್ಲಿಸಿದ್ದಾರೆ. ಈ ದ್ವಾರದ ಮೇಲೆಲ್ಲಾ ಸುಂದರ ಹೂಗಳನ್ನು ಮತ್ತು ಹೂ ಬಳ್ಳಿಗಳನ್ನು ಕೆತ್ತಿದ್ದಾರೆ. ಕಮಾನುಗಳು, ಕಂಬಗಳು, ಮೇಲ್ಛಾವಣಿಯಲ್ಲಿರುವ ಸುಂದರ ಹೂಗಳ ಕೆತ್ತನೆ ಅದ್ಭುತವಾದುದು. 'ಕುರಾನ್' ಗ್ರಂಥ ಪಠಣ ಮಾಡುವ ಸ್ಥಳವಂತೂ ಬಹಳ ಸುಂದರವಾಗಿದೆ. ಸಂಪೂರ್ಣ ಕಪ್ಪುಶಿಲೆಯಿಂದ ಕೂಡಿದ ಈ ಕಟ್ಟಡ ಬಹಳಷ್ಟು ಗಟ್ಟಿ ಮತ್ತು ಅಷ್ಟೇ ಹೊಳಪನ್ನು ಹೊಂದಿದೆ. ಇದರ ಮೇಲೆ ಕೆತ್ತಿರುವ ಬಳ್ಳಿಗಳು, ಹೂಗಳು ನೋಡುಗರ ಮನಸ್ಸನ್ನು ಆಕರ್ಷಿಸುತ್ತವೆ.

ಈ ಮಸೀದಿಯ ಅತ್ಯದ್ಭುತ ತಾಂತ್ರಿಕ ಕೌಶಲ್ಯವೆಂದರೆ "ತಿರುಗುವ ಕಂಬ". ಮಸೀದಿಯ ಒಳಭಾಗದಲ್ಲಿ ಒಂದು ಚೌಕಾಕಾರದ ಕಲ್ಲಿನ ಕಂಬವಿದೆ. ಆ ಕಂಬದಲ್ಲಿ ಸ್ವಲ್ಪ ಮೇಲ್ಭಾಗಕ್ಕೆ ನಾಲ್ಕು ಉದ್ದನೆಯ ರಂಧ್ರಗಳಿವೆ. ಆ ರಂಧ್ರದ ಒಳಭಾಗದಲ್ಲಿ ಕೈಯನ್ನಿಡಲು ಸಾಧ್ಯವಾಗುವ ರೀತಿಯಲ್ಲಿ ಆ ರಂಧ್ರಗಳನ್ನು ಮಾಡಲಾಗಿದೆ. ಆ ಕಂಬದೊಳಗೆ ದುಂಡಾಕಾರದ ಇನ್ನೊಂದು ಕಂಬವನ್ನು ಕೆತ್ತಿದೆ. ಈ ದುಂಡಾಕಾರದ ಕಂಬ ತಿರುಗುತ್ತದೆ. ಮೊದಲು ಮೇಲಿನ ಗುಂಬಜ್‌ಗಳ ಮೇಲೆ ಗಾಳಿ ಬೀಸಿದಾಗ ಆ ಗಾಳಿಯ ಒತ್ತಡಕ್ಕೆ ಈ ಒಳ ಕಂಬ ತಿರುಗುತ್ತಿದ್ದಿತು. ಆದರೆ ಇಂದು ಆ ಕಂಬ ಗಾಳಿಯ ಒತ್ತಡಕ್ಕೆ ತಿರುಗುವುದಿಲ್ಲ. ಏಕೆಂದರೆ ಮೇಲಿರುವ ರಂಧ್ರಗಳು ಕಸಕಡ್ಡಿಯಿಂದ ಆವೃತವಾಗಿರುವುದರಿಂದ ಗಾಳಿಯು

ಒಳಪ್ರವೇಶವಾಗದೆ ಈ ರೀತಿ ಆಗಿದೆ. ಆದರೆ ಈಗಲೂ ಕೈಯಿಂದ ಯಾರಾದರೂ ತಿರುಗಿಸಿದರೆ ಅದು ತಿರುಗುತ್ತದೆ.

ಹಾಗೆಯೇ ಒಂದೇ ಒಂದು ಕಲ್ಲಿನಲ್ಲಿ ಒಂದು ಸರಪಳಿಯನ್ನು ಕೆತ್ತಿ ಅಲ್ಲಿ ನೇತು ಹಾಕಲಾಗಿದೆ. ಕೆಳಭಾಗದಲ್ಲಿ ಗಂಟೆಯೋಪಾದಿಯಲ್ಲಿ ಇದನ್ನು ಕೆತ್ತಲಾಗಿದೆ. ಇದು ಒಂದು ರೀತಿಯ ಅದ್ಭುತ ಕಲೆ ಎಂದರೆ ತಪ್ಪಾಗಲಾರದು. ಈ ಮಸೀದಿ ಸಿರಾ ನಗರದಲ್ಲಿಯೇ ಅತ್ಯಂತ ದೊಡ್ಡ ಮಸೀದಿಯಾಗಿದೆ. ಇದು ಕೇಂದ್ರ ಸರ್ಕಾರದ ಸ್ವಾಮ್ಯಕ್ಕೆ ಒಳಪಟ್ಟಿರುವುದರಿಂದ ಅದು ತನ್ನ ಯಥಾ ಸ್ಥಿತಿಯನ್ನು ಕಾಯ್ದುಕೊಂಡು ಬಂದಿದೆ.

### ೪.೨.೩. ರಾಗಿಕಲ್ಲು ಗೋರಿ

ಸಿರಾ ನಗರದಲ್ಲಿರುವ ಇನ್ನೊಂದು ಮುಸ್ಲಿಮ್ ವಾಸ್ತುಶಿಲ್ಪದ ಕಲಾಕೃತಿ ಎಂದರೆ ಈ ರಾಗಿಕಲ್ಲು ಗೋರಿ. ಈ ಕಲ್ಲಿನ ಕಟ್ಟದ ಕೆಳಭಾಗದಿಂದ ಮೇಲಿನ ಭಾಗದವರೆಗೂ ಒಂದಲ್ಲ ಒಂದು ರೀತಿಯ ಚಿತ್ತಾರದ ಕೆತ್ತನೆಗಳಿವೆ. ದ್ವಾರಕ್ಕೆ ಹತ್ತಿ ಹೋಗುವಾಗ ಆ ಮೆಟ್ಟಿಲಿನ ಮೇಲಿರುವ ಶಿಲ್ಪಕಲೆ ಹಾಗೂ ಮುಂಭಾಗದ ದ್ವಾರದಲ್ಲಿ ಕಾಣುವ ಶಿಲ್ಪಕಲೆ ಬಹಳ ಚೆನ್ನಾಗಿ ಮೂಡಿದೆ. ಹೊರಭಾಗದಲ್ಲಿ ಇರುವ ಶಿಲ್ಪಕಲೆಯಂತೆಯೇ ಒಳಭಾಗದ ದ್ವಾರದಲ್ಲಿಯೂ ಶಿಲ್ಪಕಲೆಯ ವಿನ್ಯಾಸ ಕಾಣಿಸುತ್ತದೆ. ಈ ಕಟ್ಟಡದ ಮುಂಭಾಗದಲ್ಲಿ ಎರಡು ಕಿಟಕಿಗಳಿವೆ. ಒಂದು ಕಿಟಕಿ ಸಾದಾ ಕಲ್ಲಿನಿಂದ ಇದ್ದರೆ, ಇನ್ನೊಂದು ಸರಪಳಿಯಾಕಾರದಲ್ಲಿ ಕೆತ್ತಿದೆ. ಆದರೆ ಅದು ಇಂದು ಹಾಳಾಗಿದೆ.

ಈ ಕಟ್ಟಡಕ್ಕೆ 'ರಾಗಿಕಲ್ಲು ಗೋರಿ' ಎಂದು ಹೆಸರು ಬರಲು ಕಾರಣ ಎಂದರೆ, ಈ ಕಟ್ಟಡದ ಮೇಲ್ಭಾಗದ ಸುತ್ತಲೂ ದುಂಡಾಕಾರದ ಕಲ್ಲುಗಳನ್ನು ಅಂದರೆ ಬೀಸುವ ಕಲ್ಲಿನ ಮಾದರಿಯ ಕಲ್ಲುಗಳನ್ನು ನಿಲ್ಲಿಸಲಾಗಿದೆ. ಆದ್ದರಿಂದ ಈ ಕಟ್ಟಡಕ್ಕೆ ಈ ರೀತಿ ಹೆಸರು ಬರಲು ಕಾರಣವಾಗಿರಬಹುದು.

### ೪.೨.೪. ಚಿನ್ನದ ಗೋರಿ

'ಸಿರಾ' ನಗರದ ಇನ್ನೊಂದು ಮುಸ್ಲಿಮ್ ವಾಸ್ತುಶಿಲ್ಪದ ಕಲಾಕೃತಿ ಹೊಂದಿರುವ ಹಾಗೂ ನೋಡಬೇಕಾಗಿರುವ ಸ್ಥಳವೆಂದರೆ ಚಿನ್ನದ ಗೋರಿ. ಇದರ ಗೋಪುರ ವಿಶೇಷವಾಗಿದೆ. ಇದರ ಮಾದರಿ, ಶೈಲಿ, ವಿನ್ಯಾಸಕ್ಕೆ ತಕ್ಕಂತೆ ಕೊಟ್ಟಿರುವ ವರ್ಣಗಳು ನಿಜಕ್ಕೂ ನೋಡುಗರನ್ನು ಆಕರ್ಷಿಸುತ್ತದೆ. ಇದು ಒಂದು ರೀತಿಯ ತಾಜ್ ಮಹಲ್ ಎಂದರೆ ತಪ್ಪಾಗಲಾರದು. ಇದರ ಮೇಲಿನ ಶ್ವೇತ ಗೋಪುರಕ್ಕೆ ಇಟ್ಟಿರುವ, ಮಿರ-ಮಿರನೆ ಮಿಂಚುವ ಕಳಶ, ಅದರ ಮೇಲಿರುವ "ಚಿನ್ನದ ಅರ್ಧಚಂದ್ರ" ನೋಡುಗರನ್ನು ಆಕರ್ಷಿಸುತ್ತದೆ. ಸುತ್ತಲೂ ಒಂದೇ ತೆರನಾದ ಮತ್ತು ಒಂದೇ ಸಮನಾದ ಕಲ್ಲುಗಳನ್ನು ಕೊಟ್ಟು ನಿಲ್ಲಿಸಿ, ಅದರ ಮೇಲೆ ಗೋಪುರವನ್ನು ಕಟ್ಟಿದೆ. ಬಹುಶಃ ಇಂದು ಆ ರೀತಿಯ ವಿನ್ಯಾಸ ಸಾಧ್ಯವಿಲ್ಲ ಎನ್ನುವುದು

ನನ್ನ ಅಭಿಪ್ರಾಯ. ಏಕೆಂದರೆ ಅವುಗಳನ್ನು ಕೆತ್ತಿರುವ ಮತ್ತು ಜೋಡಿಸಿರುವ ಶೈಲಿ ಬಹಳ ವಿಶಿಷ್ಟವಾದುದು. ಮುಂಭಾಗದಲ್ಲಿ ಚಿಕ್ಕದಾದ ದ್ವಾರವಿದೆ. ಅದಕ್ಕೆ ತಕ್ಕಂತೆ ಅದರ ಮೇಲ್ಭಾಗದಲ್ಲಿ ಕಲ್ಲಿನಲ್ಲಿ ಕಡೆದ ಚಿತ್ತಾರಗಳು ಬಹಳ ಚೆನ್ನಾಗಿ ಮೂಡಿದೆ. ಈಗಲೂ ಆ ಗೋರಿಯ ಸುತ್ತಲೂ ಗೋಡೆಗಳನ್ನು ನಿರ್ಮಿಸಿ, ನೀರಿನ ವ್ಯವಸ್ಥೆ ಮಾಡಿ, ಅಲ್ಲಿ ಹೂ-ಗಿಡಗಳನ್ನು ನೆಟ್ಟು ಉದ್ಯಾನವನದ ರೀತಿ ಮಾಡಿದರೆ ಅದು ಸಿರಾದಲ್ಲಿಯೇ ಒಂದು ಅಪೂರ್ವ ಬೃಂದಾವನ ಆಗುವುದರಲ್ಲಿ ಸಂಶಯವಿಲ್ಲ.

ಈ ಗೋರಿಯನ್ನು ಕಟ್ಟಿಸಿದ ವ್ಯಕ್ತಿ ಎಂದರೆ ಫರೀದುಲ್ಲಾಷಾ ಎಂಬ ಗೌರ್ನರ್. ಇದನ್ನು ಸುಮಾರು ಮುನ್ನೂರು ವರ್ಷಗಳ ಹಿಂದೆ ಕಟ್ಟಿಸಿದನು ಎಂದು ಅಲ್ಲಿನ ಮುಜಾವರ್ ರವರಿಂದ ತಿಳಿದುಬಂದಿದೆ. ಈ ಗೋರಿಯ ಒಳಭಾಗದಲ್ಲಿ ಫರೀದುಲ್ಲಾಷಾ ಹುಸೇನಿ ಮತ್ತು ಹಜರತ್ ಮಾಸು ಮಲ್ಲಿಷಾ ಎಂಬ ಇಬ್ಬರೂ (ಗುರು-ಶಿಷ್ಯರು) ಸನ್ಯಾಸಿಗಳ ಸಮಾಧಿ ಇದೆ. ಇವರು ಬುಕಾರದಿಂದ ಬಂದರೆಂದು ಇಲ್ಲಿನ ಮುಜಾವರ್ ಹೇಳುತ್ತಾರೆ.

ಈ ಗೋರಿಗೆ 'ಚಿನ್ನದ ಗೋರಿ' ಎಂದು ಹೆಸರು ಬರಲು ಏನು ಕಾರಣ ಎಂಬುದು ಸರಿಯಾಗಿ ತಿಳಿಯದಾಗಿದೆ. ಕೆಲವರು ಹೇಳುವ ಪ್ರಕಾರ "ಚಿನ್ನಮ್ಮ" ಎಂಬ ಮಹಿಳೆ ಈ ಮುಸ್ಲಿಮ್ ಧರ್ಮ ಗುರುವಿನೊಡನೆ ಸಂಬಂಧ ಹೊಂದಿದ್ದಳು. ಆ ಗುರುಗಳು ಸತ್ತ ನಂತರ ನನ್ನ ಹೆಸರು ಚಿರಾಯವಾಗಿರಲಿ ಎಂದು ಭಾವಿಸಿ, ಆ ಗೋರಿಗೆ ಒಂದು ಚಿನ್ನದ ಅರ್ಧ ಚಂದ್ರವನ್ನು ಮಾಡಿಸಿಕೊಟ್ಟಳೆಂದೂ, ಅದಕ್ಕೆ ಈ ಗೋರಿಗೆ "ಚಿನ್ನದ ಗೋರಿ" ಎಂದು ಹೆಸರು ಬಂದಿತೆಂದು ಹೇಳುತ್ತಾರೆ. ಚಿನ್ನಮ್ಮನ ಸಮಾಧಿ ಈಗಲೂ ಆ ಗೋರಿಯ ಬಲಭಾಗದಲ್ಲಿ ಇರುವುದು ಕಂಡುಬರುತ್ತದೆ.

### ೪.೨.೫. ಮೊಗಲ್ ಮಸ್ಜೀದ್

ಸಿರಾದಲ್ಲಿರುವ ಈ ಮಸೀದಿ ಸುಮಾರು ಇನ್ನೂರು ವರ್ಷಗಳ ಇತಿಹಾಸ ಹೊಂದಿದೆ. ಆದರೆ ಅಂದಿನ ವಾಸ್ತುಶಿಲ್ಪದ ರಚನೆ ಇಂದು ಕಣ್ಮರೆಯಾಗಿದೆ. ಶಿಥಿಲ ಹೊಂದಿರುವ ವಾಸ್ತುಶಿಲ್ಪವನ್ನು ಪುನರುಜ್ಜೀವನಗೊಳಿಸುವ ಪ್ರಯತ್ನ ಮಾಡಲಾಗಿದೆ. ಇಲ್ಲಿ ಹೆಚ್ಚಿನ ವಾಸ್ತುಶಿಲ್ಪ ಕಂಡುಬರುವುದಿಲ್ಲ. ಇದಕ್ಕೆ ಮೊದಲು ನಿಜಾಮುದ್ದೀನ್ ಮಸೀದಿ ಎಂದು ಹೆಸರು ಇದ್ದಿತು. ಆದರೆ ಇದಕ್ಕೆ ಸಂಬಂಧಪಟ್ಟ ದಾಖಲು ಮಾಹಿತಿಗಳು ಕಣ್ಮರೆಯಾಗಿವೆ.

ಇನ್ನೂ ಸಿರಾದಲ್ಲಿ ನೋಡುವ ಮಸೀದಿಗಳೆಂದರೆ ಮಹಮದ್ ಖಾನ್ ಮಸೀದಿ ಮತ್ತು ಆಲಿ ಅಲಾದರ್ ಷಾನ ಮಸೀದಿಗಳು. ಈ ಎರಡೂ ಮಸೀದಿಗಳ ಕರ್ತೃಗಳು ಈಜಿಪ್ಟಿನಿಂದ ಬಂದ ಬರಕ್ಕಿ ಜನಾಂಗದವರು ಎಂದು ಹೇಳುತ್ತಾರೆ. ಆದರೆ ಇವುಗಳಿಗೆ ಸರಿಯಾದ ಮಾಹಿತಿಗಳು ದೊರೆತಿಲ್ಲದಿರುವುದು ವಿಷಾದನೀಯ. ಈ ಮಸೀದಿಗಳಿಗೆ ಸುಮಾರು ೪೦೦ ವರ್ಷಗಳ ಇತಿಹಾಸ ಇದೆ ಎಂದು ಊಹಿಸಬಹುದು.

### ೪.೨.೬. ಹೆರಾರ್ ಮಸೀದಿ

ಸಿರಾ ನಗರದಲ್ಲಿರುವ ಈ ಮಸೀದಿ ಬಹಳ ಕಲಾತ್ಮಕವಾಗಿದೆ. ಇದು ಸಹ ಕಲ್ಲಿನ ಕಟ್ಟಡವಾಗಿದ್ದು, ಇಲ್ಲಿನ ಕಮಾನುಗಳು, ಕಂಬಗಳು ಸುಂದರವಾಗಿವೆ. ಈ ಮಸೀದಿಯ ನವೀಕರಣ ಕಾರ್ಯ ನಡೆಯುತ್ತಾ ಇದೆ. ಇದು ಮೊಗಲರ ಕಾಲದಲ್ಲಿ ರಚಿತವಾಗಿರುವ ಕಟ್ಟಡವೆಂದು ಪೂರ್ವಿಕರು ಹೇಳುತ್ತಾರೆ. ಇದು ನೂರು ವರ್ಷಗಳ ಇತಿಹಾಸ ಹೊಂದಿರುವ ವಾಸ್ತುಶಿಲ್ಪವಾಗಿದೆ.

### ೪.೨.೭. ಈದ್ಗಾ

ಮುಸ್ಲಿಮರು ಹಬ್ಬ ಹರಿದಿನಗಳಲ್ಲಿ ಎಲ್ಲರೂ ಒಟ್ಟಾಗಿ ಸೇರಿ ಸಾಮೂಹಿಕ ಪ್ರಾರ್ಥನೆ ಸಲ್ಲಿಸುವುದಕ್ಕೋಸ್ಕರ ಮಾಡಿಕೊಂಡ ಸ್ಥಳವೇ 'ಈದ್ಗಾ'. ಇಂತಹ ಈದ್ಗಾಗಳು ಮಸೀದಿಗೊಂದರಂತೆ ಇವೆ. ಮುಸ್ಲಿಮರು ಇಂಥ ಮಸೀದಿಗೆ ಹೋಗಿ ಪ್ರಾರ್ಥನೆ ಸಲ್ಲಿಸಲು ಹೆಸರು ನೊಂದಾಯಿಸಿದರೆ ಆ ವ್ಯಕ್ತಿ ಅದೇ ಮಸೀದಿ ಮತ್ತು ಈದ್ಗಾದಲ್ಲಿ ಪ್ರಾರ್ಥನೆ ಮಾಡಬೇಕು. ಇಂಥ ಈದ್ಗಾಗಳಲ್ಲಿ ಪುರಾತನವಾದುದೆಂದರೆ, ನಮಾಜಿ ದಿಣ್ಣೆಯ ಮೇಲಿರುವ ಈದ್ಗಾ. ಇದರ ಸ್ಥಾಪನೆ ಕ್ರಿ.ಶ.೧೬೩೪ರಲ್ಲಿ ಆದ್ದರಿಂದ ಇದರ ಸಂಸ್ಥಾಪಕ ಮಲ್ಲಿಕ್ ರಿಹಾನನೇ ಆಗಿರಬಹುದು ಎಂದು ಊಹಿಸಲಾಗಿದೆ.

ಸಿರಾ ತಾಲ್ಲೂಕಿನ ವ್ಯಾಪ್ತಿಯಲ್ಲಿ ನೋಡಿದಾಗ ಇಂಥಹ ಪುರಾತನವಾಗಿರುವ ಮಸೀದಿಗಳು ತುಂಬ ಕಡಿಮೆ. ಆದರೆ ಸಿರಾ ನಗರದಲ್ಲಿರುವ ಮಸೀದಿಗಳೇ ಹೆಚ್ಚು ಪುರಾತನ ಹಾಗೂ ಪ್ರಸಿದ್ಧವಾಗಿರುವುದು. ತಾಲ್ಲೂಕಿನಾದ್ಯಂತ ೪-೫ ಕಡೆ ಪುರಾತನ ಮಸೀದಿಗಳು ಮೊದಲೂರು, ಹೋಜುಗುಂಟೆ, ಗಂಡೀಹಳ್ಳಿ, ಹಾಲೇನಹಳ್ಳಿ ಹೂಸೂರುಗಳಲ್ಲಿ ಕಂಡುಬರುತ್ತವೆ. ಇಲ್ಲಿರುವ ಗಂಡೀಹಳ್ಳಿ ಮಠದಲ್ಲಿ ಪ್ರಸಿದ್ಧವಾದ 'ಬಾಬಾ ಬುಡ್ನಯ್ಯ' ದೇವಸ್ಥಾನ ಇದೆ. ಇದು ಮುಸ್ಲಿಮ್ ಜನಾಂಗದವರ ದೇವಾಲಯವಾದರೂ ಇಲ್ಲಿ ಇದಕ್ಕೆ ಪೂಜೆ ಸಲ್ಲಿಸುವವರು ಯಾದವರು ಅಥವಾ ಗೊಲ್ಲರು. ಈ ದೇವಾಲಯದ ಒಳಭಾಗದಲ್ಲಿ ಅಂದರೆ ಗರ್ಭಗುಡಿಯಲ್ಲಿ ಸುತ್ತಲೂ ಬಾಬಯ್ಯನ ವಿಗ್ರಹಗಳಿದ್ದು, ನಡುವೆ ನಾಗರಹಾವಿನ ವಿಗ್ರಹವಿದೆ.

ಸಿರಾದಲ್ಲಿ ಖಾನ್ ಬಾಗ್ ಎಂಬ ಸುಂದರವಾದ ಉದ್ಯಾನವನ ಇದ್ದಿತು. ದಿಲಾವರಖಾನ್ ಎಂಬ ಮೊಗಲ್ ಅಧಿಕಾರಿ ಇದನ್ನು ಕ್ರಿ.ಶ.೧೬೮೬ರಲ್ಲಿ ನಿರ್ಮಿಸಿದನು. ಮುಂದೆ ಸಿರಾವನ್ನು ವಶಪಡಿಸಿಕೊಂಡ ಹೈದರಾಲಿಯು ಕೂಡಾ ಈ ಉದ್ಯಾನವನವನ್ನು ರಕ್ಷಿಸಿದನು. ಹೈದರಾಲಿ ಬೆಂಗಳೂರಿನ ಲಾಲ್ ಬಾಗ್ ನಿರ್ಮಿಸಲು ಈ ಉದ್ಯಾನವನವೇ ಪ್ರೇರಣೆ.

ದಖನ್ನಿನಲ್ಲಿ ಕ್ರಿ.ಶ.೧೬೦೦ರಲ್ಲಿ ಮೊಗಲರ ಆಕ್ರಮಣಗಳು ಆರಂಭವಾದವು. ಹೀಗೆ ಅಧಿಕಾರ ಹಸ್ತ ಹಿಡಿದ ಮೊಗಲರು ಕೆಲವು ದಖನಿ ಕಲಾವಿದರನ್ನು ಕರೆದುಕೊಂಡು ಬಂದರು. ಈ ಮೊಗಲ ಮತ್ತು ದಖನಿ ಕಲಾವಿದರಿಂದ ರಚಿತವಾದ ಮೊಗಲರ ಚಿತ್ರಕಲೆ ತುಂಬಾ ಭಿನ್ನವಾಗಿ ಬೆಳೆಯತೊಡಗಿತು. ಈ ಸರದಾರರು ದಖನ್ನಿನ ಸಸ್ಯ ಸಂಪತ್ತು, ಭೌಗೋಳಿಕ ಸೌಂದರ್ಯಕ್ಕೆ ಮಾರು ಹೋದರು. ಈ

ಹಿನ್ನಲೆಯಲ್ಲಿ ಮೊಗಲರ ಚಿತ್ರಕಲೆ ವಿಭಿನ್ನ ಶೈಲಿಗಳಿಂದ ಬೆಳೆಯತೊಡಗಿತು. ಈ ನೂತನ ಶೈಲಿಯನ್ನು 'ದಖನಿ-ಮೊಗಲ ಶೈಲಿ'ಯೆಂದು ಕರೆಯಲ್ಪಡುತ್ತದೆ.''

ಒಟ್ಟಾರೆ ಇಂಡೋ-ಸಾರ್ಸೆನಿಕ್ ಶೈಲಿಯ ಉತ್ತಮ ವಾಸ್ತುಶಿಲ್ಪವನ್ನು ಸಿರಾ ಮತ್ತು ಶ್ರೀರಂಗಪಟ್ಟಣಗಳಲ್ಲಿಯು ಕಾಣಬಹುದು. ಸಿರಾದಲ್ಲಿನ ಗುಮ್ಮಟಗಳು ಬೃಹತ್ ಅಲ್ಲವಾದರೂ ತುಂಬಾ ಹಗುರ ಹಾಗೂ ಸುಂದರ ಕೆತ್ತನೆಯ ರಚನೆಗಳಾಗಿವೆ.

### ೪.೨.೮. ಸಿರಾದ ಕೋಟೆ

ಕರ್ನಾಟಕದಲ್ಲಿ ಸುಮಾರು ೧೨ನೆಯ ಶತಮಾನದಿಂದಲೂ ನಾಯಕ ವಂಶದವರು ಆಳ್ವಿಕೆ ನಡೆಸುತ್ತಿದ್ದರು. ಇವರಲ್ಲಿ ಆನೆಗೊಂದಿಯಿಂದ ಬಂದ ಇರಸಪ್ಪರಾಜನೆಂಬುವನು ಪ್ರಮುಖನಾಗಿದ್ದನು. ಇವರ ವಂಶಜರೇ ಹಿರೇ ಒಡೆಯರು. ಸದರಿ ಹಿರೇ ಒಡೆಯರ ವಂಶಜರಾದ ರಂಗಪ್ಪನಾಯಕನು ಕ್ರಿ.ಶ.೧೫೨೧ರ ಸುಮಾರಿನಲ್ಲಿ ಈ ಕೋಟೆಯನ್ನು ಕಟ್ಟಿಸಿದನು.

ಸಿರಾದ ಕೋಟೆಯನ್ನು ಕಟ್ಟುವುದಕ್ಕೆ ಆಗಿನ ಕಾಲದಲ್ಲಿ ಪ್ರಚಲಿತದಲ್ಲಿದ್ದ ಕೋಟೆಯ ತಾಂತ್ರಿಕತೆಯನ್ನು ಬಳಸಲಾಗಿತ್ತು. ಕೋಟೆ ಕಟ್ಟುವ ಮೊದಲು ಕೆರೆಕಟ್ಟಿ, ಕೆರೆಯ ನೀರು ಕೋಟೆಯ ಕಂದಕಕ್ಕೆ ಉಪಯೋಗವಾಗುವುದರ ಜೊತೆಗೆ ಭವಿಷ್ಯದಲ್ಲಿ ನಾಡಿನ ಜನತೆಗೆ ಆಹಾರ ಉತ್ಪಾದನೆ ಆರ್ಥಿಕ ಸ್ಥಿತಿಯ ಬೆಳವಣಿಗೆಗೆ ಉಪಯೋಗವಾಗುತ್ತಿತ್ತು.

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಹೇಳುವಂತೆ "ಹಲವು ದುರ್ಗಗಳಲ್ಲಿ ನೆಲದುರ್ಗ ಅಥವಾ ಭೂದುರ್ಗವು ಒಂದು. ಇಂಥಹುದರಲ್ಲಿ ಸಿರಾದ ಕೋಟೆಯು ಸಹ ಭೂ ದುರ್ಗ ಮಾದರಿಯಲ್ಲಿಯೇ ನಿರ್ಮಾಣವಾಗಿದೆ. ಪ್ರಕೃತಿಯಲ್ಲಿ ಒಡಮೂಡಿ ಬಂದಿರುವ ಬೃಹತ್ ಬಂಡೆಯನ್ನೇ ಬುನಾದಿಯನ್ನಾಗಿ ಮಾಡಿಕೊಂಡು, ಬಟ್ಟಬಯಲಿನಲ್ಲಿ ಕಟ್ಟಿದ ನೆಲಗೋಟೆ, ಈ ಕೋಟೆಯು ಆಕಾಶವನ್ನು ಮುಟ್ಟುವುದೋ ಎಂಬಂತೆ ಎತ್ತರವಾಗಿ ಚೌಕಾಕಾರವಾಗಿ ನಿರ್ಮಾಣಗೊಂಡಿದೆ.

ಸಂರಕ್ಷಣೆಯ ದೃಷ್ಟಿಯಿಂದ ಕೋಟೆ ಕೊತ್ತಲಗಳನ್ನು ಹೆಚ್ಚಾಗಿ ಬೆಟ್ಟ ಗುಡ್ಡಗಳಲ್ಲಿ ಕಟ್ಟುತ್ತಿದ್ದುದು ರೂಢಿ. ಆದರೆ ಸಿರಾದ ಕೋಟೆ ಗಟ್ಟಿಕಲ್ಲುಗಳನ್ನು ಅಚ್ಚುಕಟ್ಟಾಗಿ ಮಾಡಿದ ಶಿಲೆಗಳಿಂದ ಗಾರೆಯ ಮೂಲಕ ಕಟ್ಟಿರುವ ಭದ್ರವಾದ ಕೋಟೆ. ಇಲ್ಲಿನ ಕೋಟೆಯ ನೆಲಗೋಡೆಯು ಮೂರು ಹೆಬ್ಬಾಗಿಲುಗಳನ್ನು ಒಳಗೊಂಡಿದೆ. ಅದರಲ್ಲಿ ಮೊದಲ ಮುಖ್ಯ ದ್ವಾರವು ಈಗ ಶಿಥಿಲಗೊಂಡಿದೆ. ಇದನ್ನು ಹುಲಿ ಮುಖದ ಶೈಲಿಯಲ್ಲಿ ನಿರ್ಮಿಸಲಾಗಿದೆ. ಈ ಕೋಟೆ ಗೋಡೆಯಲ್ಲಿಯೇ ಸೈನಿಕರ ಕಾವಲು ಮನೆಗಳು ರಚಿಸಲ್ಪಟ್ಟಿವೆ. ಕೋಟೆಯ ಒಳಗೆ ವಿಶಾಲ ಮೈದಾನದಲ್ಲಿ ಅರಸರ ಅರಮನೆ ಅಂತಃಪುರಗಳು ನಿರ್ಮಾಣಗೊಂಡಿದ್ದವು. ಅಲ್ಲದೆ ಉದ್ಯಾನವನವೂ, ಪೂಜೆಗಾಗಿ ಮತ್ತು ಅಂತಃಪುರದಲ್ಲಿ ಸ್ತ್ರೀಯರ ಅಲಂಕಾರಕ್ಕಾಗಿ ಬೆಳೆಸಿದ್ದ ಹೂವಿನ ತೋಟಗಳು ಇದ್ದುದು ಕಂಡುಬರುತ್ತದೆ. ನಿತ್ಯ ಪೂಜೆಗೊಳ್ಳುತ್ತಿದ್ದ ಮಾರುತಿ ದೇವಾಲಯವು

ಇಲ್ಲಿ ಇದ್ದುದರ ಬಗ್ಗೆ ತಿಳಿದುಬಂದಿದೆ. ಬಯಲು ಮೈದಾನಕ್ಕೆ ಹೊಂದಿಕೊಂಡಂತೆ ಅರಮನೆ, ಅರಮನೆಯ ಪಕ್ಕದಲ್ಲಿಯೇ ಒಂದು ಕೊಳ, ಕೊಳದಿಂದ ನೀರನ್ನು ಎತ್ತಿ ಕೋಟೆಯೊಳಗೆ ಬೇಕಾದ ಕಡೆಗೆ ನೀರು ಸರಬರಾಜು ಮಾಡುತ್ತಿದ್ದ ಕಾರಂಜಿಗಳ ವ್ಯವಸ್ಥೆ, ಈ ಕಾರಂಜಿಗೆ ಹೋಗುತ್ತಿದ್ದ ನೀರಿಗೆ ಇಟ್ಟಿಗೆ ಗಾರೆಗಳಿಂದ ಕಟ್ಟಿದ ಕೊಳಾಯಿಗಳು, ಕೊಳದಿಂದ ನೀರನ್ನು ಮೇಲಕ್ಕೆತ್ತಲು ಎತ್ತುಗಳ ಸಹಾಯದಿಂದ ತಿರುಗುತ್ತಿದ್ದ ತಿರುಗಣಿ ಯಂತ್ರದ ವ್ಯವಸ್ಥೆ ಮಾಡಿದ್ದರು"[೫] ಎಂದು ಎಚ್ .ವಿ.ವೀರನಾಯಕ ಅವರು ತಮ್ಮ 'ಗುಮ್ಮಳ್ಳಿ ಕದನ' ಎಂಬ ಕೃತಿಯಲ್ಲಿ ಹೇಳಿದ್ದಾರೆ. ಆದರೆ ಇವರು ಹೇಳುವ ಯಾವ ಅವಶೇಷಗಳು ಈಗ ಇಲ್ಲಿ ಕಂಡುಬರುವುದಿಲ್ಲ.

ಸಿರಾದ ಕೋಟೆಯು ಅಭೇದ್ಯವಾಗಿದ್ದು ಭದ್ರವಾಗಿದೆ. ಈ ಕೋಟೆ ೨೦ ಅಡಿ ಎತ್ತರ ೨೦ ಅಡಿ ಅಗಲವಾಗಿರುವುದರ ಜೊತೆಗೆ ಇದರಲ್ಲಿನ ಕೊತ್ತಲಗಳು ವಿಸ್ತಾರವಾಗಿದ್ದು, ಫಿರಂಗಿಗಳನ್ನು ಇಟ್ಟು ಶತ್ರುಗಳನ್ನು ಹಿಮ್ಮೆಟ್ಟಿಸಲು ಎಲ್ಲಾ ರೀತಿಯ ಅನುಕೂಲಗಳನ್ನು ಮಾಡಿದೆ. ಪಹರೆ ಮಾಡುವವರಿಗೆ ವಿಶ್ರಾಂತಿ ಪಡೆಯಲು ಕಾವಲು ಮನೆಗಳನ್ನು ನಿರ್ಮಿಸಿದ್ದಾರೆ. ಅವುಗಳ ಪಕ್ಕದಲ್ಲಿಯೇ ನೀರಿನ ತೊಟ್ಟಿಗಳನ್ನು ಸಹ ನಿರ್ಮಿಸಲಾಗಿದೆ. ಚೌಕಾಕಾರದ ಕೊತ್ತಲಗಳಲ್ಲಿ ಫಿರಂಗಿ ಕಿಂಡಿಗಳನ್ನು ಬಿಡಲಾಗಿದೆ. ಈ ಎಲ್ಲಾ ಅಂಶಗಳಿಂದ ಕೋಟೆಯು ಬಹಳ ಭದ್ರವಾಗಿತ್ತೆಂದು ಊಹಿಸಲಾಗಿದೆ. ಈ ಕೋಟೆಯನ್ನು ಒಳ ಪ್ರವೇಶಿಸಲು ಉತ್ತರ ದಿಕ್ಕಿನಿಂದ ಮೂರು ಬಾಗಿಲುಗಳನ್ನು ದಾಟಬೇಕು. ಈ ದ್ವಾರಗಳು ನೇರವಾಗಿರದೆ ಅಂಕುಡೊಂಕಾಗಿ ಕೋಟೆಯನ್ನು ಪ್ರವೇಶಿಸಬೇಕು. ಅಲ್ಲದೆ ದಕ್ಷಿಣ ದಿಕ್ಕಿನಲ್ಲಿ ಮತ್ತು ಆಗ್ನೇಯ ದಿಕ್ಕಿನಲ್ಲಿ ಚಿಕ್ಕ ಬಾಗಿಲನ್ನು ಬಿಡಲಾಗಿದೆ. ಈ ಬಾಗಿಲು ಕೆರೆಯ ನೀರನ್ನು ಕಂದಕಕ್ಕೆ ಬಿಡಲು ಅನುಕೂಲವಾಗುತ್ತಿತ್ತು. ಈ ಕಂದಕಗಳು ೩೦ ಅಡಿ ಆಳ ಮತ್ತು ೩೦ ಅಡಿ ಅಗಲವಾಗಿದ್ದವು. ಕೋಟೆಯನ್ನು ರಕ್ಷಿಸಲು ಸುತ್ತೂವರೆದು ಚೌಕಾಕಾರದ ಕೊತ್ತಲಗಳನ್ನು ನಿರ್ಮಿಸಲಾಗಿದೆ. ಕೋಟೆಯ ಸುತ್ತಲೂ ಇರುವ ಆಳವಾದ ಕಂದಕಗಳಿಗೆ ಕೆರೆಯ ನೀರನ್ನು ಸದಾ ತುಂಬುತ್ತಿದ್ದರು. ಅಲ್ಲದೆ ಕೋಟೆಯ ಹೊರಭಾಗದಲ್ಲಿ ಇಲ್ಲಿ ಆಳ್ವಿಕೆ ಮಾಡಿದ ಸುಬೇದಾರರ ಗೋರಿಗಳು, ದರ್ಗಾಗಳು ಕಂಡುಬರುತ್ತವೆ.

## ಕೋಟೆಯ ಮಹತ್ವ

ಸಿರಾ ಕೋಟೆಯು ನೆಲಕೋಟೆಯಾಗಿದ್ದರೂ ಬಹಳ ಭದ್ರವಾಗಿ ನಿರ್ಮಿಸಲಾಗಿದೆ. ಕೋಟೆ ಚೌಕಾಕಾರವಾಗಿ ಸುತ್ತಲೂ ಕೊತ್ತಲಗಳನ್ನು ಒಳಗೊಂಡಿದೆ. ಇದರಿಂದ ಹೆಚ್ಚಿನ ಕಾವಲು ಪಡೆಯನ್ನು ನೇಮಿಸಲು ಅನುಕೂಲವಾಗುತ್ತಿತ್ತು. ಕೋಟೆಯ ಸುತ್ತಲೂ ನುಗ್ಗೆ ಮರಗಳನ್ನು ಬೆಳೆಸಿ ಅವುಗಳ ಜೊತೆಯಲ್ಲಿ ಹಬ್ಬುವಂತೆ ಮುಳ್ಳಿನ ಬಳ್ಳಿಯನ್ನು ಬೆಳೆಸುತ್ತಿದ್ದರು. ಅಷ್ಟೇ ಅಲ್ಲದೆ, ಸುತ್ತಲೂ ಆಳವಾದ ಕಂದಕವನ್ನು ಹೊಂದಿಕೊಂಡಂತೆ ಹಾಗೂ ಜಗಲಿ ಹಾಕಿದಂತೆ ಜಾಲಿ ಗಿಡಗಳ ಸಾಲುಗಳು ಇರುವುದನ್ನು ಕಾಣಬಹುದು. ಈ ಮುಳ್ಳುಗಿಡಗಳಿಗೆ ಅಂಟಿಕೊಳ್ಳುವಂತೆ ರಸಬಳ್ಳಿ ಅಂದರೆ ವಿಷಪೂರಿತ ಬಳ್ಳಿಗಿಡಗಳನ್ನು ಬೆಳೆಸಿದ್ದರು. ಆ ಬಳ್ಳಿಗಳು ಅಗಲಿಕೊಂಡು ಕಂದಕದಲ್ಲಿಯೂ ಕೂಡಾ ಬೆಳೆದು ಹರಡಿ ಹಬ್ಬಿದ್ದವು. ಮೈ ಪರಚುವಂತ ಮುಳ್ಳಿನ ಗಿಡಗಳು ಒಂದಕ್ಕೊಂದು ಅಂಟಿಕೊಂಡಿದ್ದವು. ಇದರಿಂದ ಕೋಟೆಯ

ಗೋಡೆಯನ್ನು ಶತ್ರುಗಳು ಸುಲಭವಾಗಿ ಮುಟ್ಟಲು ಅಸಾಧ್ಯವಾಗಿತ್ತು. ಇದರಿಂದಾಗಿ ಕೋಟೆಯ ಗೋಡೆಯು ಮತ್ತಷ್ಟು ಸುಭದ್ರವಾಗಿ ನಿಂತಿತು. ಇದರಿಂದ ಈ ಕೋಟೆಯನ್ನು ಹೋಲುವ ಅಭೇದ್ಯವಾದ ಕೋಟೆ ಇನ್ನೊಂದಿಲ್ಲವಾಯಿತು.

'ಶಿವತತ್ವರತ್ನಾಕರ' ಎಂಬ ರಾಜನೀತಿ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥವನ್ನು ಸಂಕಲಿಸಿದ ಕೆಳದಿ ನೃಪ ಬಸವರಾಜನು 'ಕೋಟೆಯಿಲ್ಲದ ರಾಜನು ವಿಷವಿಲ್ಲದ ಹಾವಿನಂತೆ, ಮದವಿಲ್ಲದ ಆನೆಯಂತೆ' ಎಲ್ಲರಿಗೂ ಸುಲಭವಾಗಿ ವಶವಾಗಿ ಬಿಡುವನು ಎಂದು ಹೇಳಿದ ಮಾತು ಅರ್ಥಪೂರ್ಣವಾಗಿದೆ.

ಸಿರಾದ ಕೋಟೆಯ ಬಹಳಷ್ಟು ಭಾಗಗಳು ಇಂದಿಗೂ ಗಟ್ಟಿಯಾಗಿ ಉಳಿದುಬಂದಿದೆ. ಉತ್ತರ ದಿಕ್ಕಿನಲ್ಲಿ ಮೊದಲ ಬಾಗಿಲಿದೆ. ಎರಡನೆಯ ಬಾಗಿಲು ದಿಡ್ಡಿಬಾಗಿಲು. ಈ ಎರಡೂ ಹಿಂದೂ ಶೈಲಿಯ ಬಾಗಿಲುಗಳಾಗಿವೆ. ಈ ಬಾಗಿಲುಗಳನ್ನು ದಾಟಿ ಒಳಗೆ ಹೋದರೆ ಕಂಬಗಳು ಕಂಡುಬಂದಿದ್ದು, ಅವುಗಳ ಮೇಲೆ ಹಿಂದೂ ಶೈಲಿಯ ಶಿಲ್ಪಗಳನ್ನು ಕಾಣಬಹುದು. ಹೈದರಾಲಿ ಮತ್ತು ಟಿಪ್ಪು ಸುಲ್ತಾನನಿಂದ ಈ ಕೋಟೆ ನವೀಕರಣಗೊಂಡಿದ್ದು, ಕೆಲವು ಮುಸ್ಲಿಮ್ ಶೈಲಿಯ ಶಿಲ್ಪಗಳು ಕಂಡುಬರುತ್ತವೆ. ಹೀಗೆ ಸಿರಾದ ಕೋಟೆಯು ತನ್ನ ಮಹತ್ವವನ್ನು ಹೊಂದಿರುವುದು ಕಂಡುಬರುತ್ತದೆ.

**ಅಡಿಟಿಪ್ಪಣಿ**

೧. ಹಯವದನರಾವ್ ಸಿ., **ಮೈಸೂರ್ ಗ್ಯಾಸೆಟಿಯರ್**, ವ್ಯಾಲ್ಯೂಂ ೪, ೧೯೩೦, ಪು.೧೩

೨. ಕೊರಟಿ ಶ್ರೀನಿವಾಸರಾವ್., ಇರಾವತಿ, ೧೯೭೭, ಪು.೯೯.

೩. ರೈಸ್.ಬಿ.ಎಲ್.,(ಸಂ), ಎಪಿಗ್ರಾಫಿಯಾ ಕರ್ನಾಟಿಕ XII, ಸಿರಾ-೧೩, ಪು.೬೬

೪. ದಿವಾಕರ ರಂ.ರಾ.,(ಸಂ), **ಕರ್ನಾಟಕ ಪರಂಪರೆ**, ಸಂಪುಟ ೨, ೧೯೭೦, ಪು.೨೫೨

೫. ಶರ್ಮಾ ಎಚ್.ಡಿ., **ಟಿಪ್ಪು ನಿಜಸ್ವರೂಪ**, (ಅನು : ಪ್ರಧಾನ್ ಗುರುದತ್ತ), ೨೦೦೩, ಪು.೬೫

೬. ನರಸಿಂಹನ್ ಆ.ಲ., **ಕರ್ನಾಟಕ ಭಿತ್ತಿ ಚಿತ್ರಪರಂಪರೆ**, ೧೯೯೮, ಪು.೭೩

೭. **ಯಾಸೀನ್ ಖುದ್ದೋಸಿ., ಸೀತಾರಾಮ ಜಾಗೀರ್ ದಾರ್.**, (ಸಂ), ಕರ್ನಾಟಕದ ಪರ್ಶಿಯನ್ ಅರಾಬಿಕ್ ಮತ್ತು ಉರ್ದು ಶಾಸನಗಳು', ೨೦೦೧, ಪು.೨೭೪

೮. ಸಂದರ್ಶಕರು : ಹಜರತ್ ನಯಾಜ್ ಸಾಹೇಬ್, ೧೩-೦೨-೨೦೦೭

೯. ಅಭಿಶಂಕರ್ ಕೆ.,(ಪ್ರ.ಸಂ), **ಮೈಸೂರ್ ಸ್ಟೇಟ್ ಗ್ಯಾಸೆಟಿಯರ್ ತುಮಕೂರ್ ಡಿಸ್ಟ್ರಿಕ್ಟ್**, ೧೯೬೯, ಪು.೫೮

೧೦. ನಾಗಣ್ಣ., (ಸಂ), **ಪ್ರಜಾಪ್ರಗತಿ ಪತ್ರಿಕೆ**, ೨೦೦೬, ಪು.೪

೧೧. ಅಣ್ಣಿಗೇರಿ ಎ.ಎಂ., **ಬಿಜಾಪುರ ಶಿಲ್ಪಕಲಾ ವೈಭವ**, ೧೯೮೦, ಪು.೧೬

೧೨. ಕೊರಟಿ ಶ್ರೀನಿವಾಸರಾವ್., **ಪೂರ್ವೋಕ್ತ**, ೧೯೭೭, ಪು.೯೦

೧೩. ತಿಪ್ಪೇರುದ್ರಸ್ವಾಮಿ ಎಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**, ೨೦೦೧, ಪು.೬೦೮

೧೪. ಅರುಣಿ ಎಸ್.ಕೆ., **ದಖನಿ ಚಿತ್ರಕಲೆ**, ೨೦೦೧, ಪು.೭೫

೧೫. ವೀರನಾಯಕ ಎಚ್.ವಿ., **ಗುಮ್ಮನಳ್ಳಿ ಕದನ**, ೧೯೮೩, ಪು.೫

## ಅಧ್ಯಾಯ-೫

# ಅಧ್ಯಯನದಲ್ಲಿ ತಳೆದ ನಿಲುವುಗಳು

ಕರ್ನಾಟಕ ಸಂಸ್ಕೃತಿ ಪುರಾತನವಾದದ್ದು, ಅಲ್ಲದೆ ಐತಿಹಾಸಿಕ ಮಹತ್ವ ಪಡೆದ ಪ್ರಾಚೀನ ನಾಡಾಗಿದೆ. ಸಾಮ್ರಾಜ್ಯಗಳ ನಿರ್ಮಾಣ ಮತ್ತು ಅವುಗಳ ವ್ಯವಸ್ಥೆಯಲ್ಲಿ ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪ ಆದಿಯಾಗಿ ಜೀವನದ ಎಲ್ಲಾ ರಂಗಗಳಲ್ಲಿಯೂ ಕರ್ನಾಟಕದ ಸಾಧನೆ ಸಾರ್ಥಕತೆಯನ್ನು ಪಡೆದಿದೆ. ಪ್ರಾಚೀನ ಕಾಲದಿಂದಲೂ ಭಾರತೀಯ ಸಂಸ್ಕೃತಿಗೆ ತನ್ನದೇ ಆದ ಭಿನ್ನವಾದ ಪರಂಪರೆಯನ್ನಿತ್ತು ಅದನ್ನು ಬೆಳೆಸಿಕೊಂಡು ಬಂದಿದ್ದಲ್ಲದೆ ಸರ್ವಧರ್ಮ ಸಮನ್ವಯವನ್ನು ಸ್ಥಾಪಿಸಿರುವ ಭೂಮಿ ಇದಾಗಿದೆ. ಇಂಥ ಹಿನ್ನೆಲೆಯನ್ನು ಪಡೆದ ಕರ್ನಾಟಕದ ತುಮಕೂರು ಜಿಲ್ಲೆಯ ತಾಲ್ಲೂಕು ಕೇಂದ್ರವೇ 'ಸಿರಾ'.

ಕರ್ನಾಟಕದ ಚರಿತ್ರೆಯಲ್ಲಿ ಹಿರಿಮೆಯನ್ನು ಗಳಿಸಿದ ವಿಜಯನಗರವು ತನ್ನ ಸ್ವತಂತ್ರವಾದ ಆಡಳಿತ ಪದ್ಧತಿಯಿಂದ ಬೆಳೆಸಿದ ಮಾಂಡಲೀಕ, ಸಾಮಂತ ವ್ಯವಸ್ಥೆಯು ವಿಜಯನಗರದ ಅವನತಿಯ ನಂತರ ಚಿಕ್ಕ ಪುಟ್ಟ ಪಾಳೆಯಪಟ್ಟುಗಳಾಗಿ ರಚನೆಗೊಂಡವು. ಇಂದು ಚರಿತ್ರೆಯಲ್ಲಿ ಕಾಣುವ ಅನೇಕ ರಾಜಮನೆತನಗಳ ಜೊತೆಗೆ ಪಾಳೆಯಗಾರರ ಮತ್ತು ನವಾಬರ ಮನೆತನಗಳನ್ನು ಕೂಡಾ ಕಾಣಬಹುದಾಗಿದೆ. ಇಂಥ ಮನೆತನಗಳಲ್ಲಿ ಸಿರಾದ ನವಾಬರು ಪ್ರಮುಖರಾಗಿದ್ದು, ಇವರ ಬಗ್ಗೆ ವಸ್ತುನಿಷ್ಟವಾದ ಅಧ್ಯಯನ ಕೈಗೊಳ್ಳಲಾಗಿದೆ. ಹೀಗೆ ನವಾಬರ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ 'ಸಿರಾ' ಭೂ ಪ್ರದೇಶವೂ ಒಂದು.

'ಸಿರಾ' ಭೂ ಪ್ರದೇಶವು ಪ್ರಾಚೀನತೆಯ ಕುರುಹುಗಳನ್ನು ಉಳಿಸಿಕೊಂಡು ತನ್ನ ಸ್ವಂತಿಕೆಯ ಸಂಸ್ಕೃತಿಯನ್ನು ಸಾರುತ್ತಿದೆ. ರಾಜ ಮಹಾರಾಜರು, ವೀರ ಯೋಧರು, ಸಾಧು ಸಂತರು, ಸಾಂಸ್ಕೃತಿಕ ನಾಯಕರು ಆಳಿ ಅಮರವಾದ ಹಿರಿಮೆ ಸಿರಾ ತಾಲ್ಲೂಕಿಗಿದೆ. ಗಂಗರು, ರಾಷ್ಟ್ರಕೂಟರು, ನೊಳಂಬರು, ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ಇಲ್ಲಿ ಆಳ್ವಿಕೆ ನಡೆಸಿದ್ದಾರೆ. ಪ್ರಸ್ತುತ ಸಿರಾದ ನವಾಬರ ಚರಿತ್ರೆಯನ್ನು ಕಟ್ಟುವಲ್ಲಿ ಪರ್ಶಿಯನ್ ಶಾಸನಗಳು ಮತ್ತು ಮುಸ್ಲಿಮ್ ಸ್ಮಾರಕಗಳು ಈ ಅಧ್ಯಯನಕ್ಕೆ ನೆರವಾಗಿವೆ. ಆದರೂ ಇನ್ನೂ ದೊರೆಯಬಹುದಾದ ಎಷ್ಟೋ ಚರಿತ್ರೆಯ ಮಾಹಿತಿಗಳು ಕಣ್ಮರೆಯಾಗಿವೆ. ಹೀಗಾಗಿ ದೊರೆತ ಮಾಹಿತಿಗಳನ್ನೇ ಸಾಧ್ಯವಾದಷ್ಟು ವಿಶ್ಲೇಷಣೆಗೆ ಒಳಪಡಿಸಿ ನವಾಬರ ಚರಿತ್ರೆಯನ್ನು ನಿರೂಪಿಸುವ ಪ್ರಯತ್ನ ಮಾಡಲಾಗಿದೆ. ಹಾಗೆಯೇ ಅಧ್ಯಯನಕ್ಕೆ ಹಿನ್ನಲೆಯಾಗಿ ಅಲ್ಲಿಯ ಭೌಗೋಳಿಕ ಪರಿಸರದ ಸ್ಥೂಲ ಪರಿಚಯ ನೀಡಲಾಗಿದೆ.

ಸಿರಾದ ಪಾಳೆಯಗಾರರ ಮನೆತನ ವಿಜಯನಗರದ ಅರಸರ ಕಾಲದಲ್ಲಿ 'ಹಿರೇಒಡೆಯ' ಎಂಬುವರಿಂದ ಕ್ರಿ.ಶ.೧೫೨೧ರಲ್ಲಿ ಪ್ರಾರಂಭವಾಯಿತು ಎನ್ನಲಾಗಿದೆ. ಆದರೆ ದೊರೆತಿರುವ ಹಲವು ಶಾಸನಗಳ ಪ್ರಕಾರ ಸುಮಾರು ೮ನೇ ಶತಮಾನದಿಂದಲೂ ಸಿರಾ ಭೂಪ್ರದೇಶ ತನ್ನ ರಾಜಕೀಯ ಮಹತ್ವವನ್ನು ಪಡೆದುಕೊಂಡು ಬಂದಿದೆ ಎಂದು ತಿಳಿದುಬರುತ್ತದೆ. 'ಸಿರಾ' ಪಟ್ಟಣ ಸ್ಥಾಪನೆಯಾಗುವುದಕ್ಕೆ ಮೊದಲು ದಟ್ಟ ಅರಣ್ಯವಾಗಿದ್ದ ಈ ಭೂ ಪ್ರದೇಶವನ್ನು ರಂಗಪ್ಪರಾಜನು ತನ್ನ ಅಧೀನಕ್ಕೆ ತೆಗೆದುಕೊಂಡು ಆಳ್ವಿಕೆ ನಡೆಸುತ್ತಿದ್ದನು. ಈತನು ಬೆಳೆಯುತ್ತಿದ್ದ ಜನಸಂಖ್ಯೆಗೆ ಅನುಗುಣವಾಗಿ ಮೂಲಭೂತ ಸೌಕರ್ಯ ಕಲ್ಪಿಸುವ ಸಲುವಾಗಿ ದಟ್ಟ ಅರಣ್ಯವನ್ನು ಸಮತಟ್ಟು ಮಾಡಲು ಆದೇಶಿಸಿದನು. ಈ ವೇಳೆಗೆ ಗೌಳಿಗ ಜನಾಂಗಕ್ಕೆ ಸೇರಿದ 'ದೇವಣ' ಮತ್ತು 'ಸಿರಿಯಪ್ಪ' ಎಂಬುವರು 'ಬೂದಿ ದಿಬ್ಬ' ಎಂದು ಕರೆಯುವ ಸ್ಥಳದಲ್ಲಿ ಕೊಪ್ಪವನ್ನು ಹಾಕಿಕೊಂಡು ನೆಲೆನಿಂತರು. ಇಂಥ ಸಂದರ್ಭದಲ್ಲಿ ಹೆಚ್ಚಿನ ಶ್ರಮ ಮತ್ತು ನಿಷ್ಠೆಯಿಂದ ಕಾರ್ಯನಿರ್ವಹಿಸಿದ 'ದೇವಣ್ಣ' ಮತ್ತು 'ಸಿರಿಯಪ್ಪ' ರಂಗಪ್ಪನಾಯಕನ ಮೆಚ್ಚುಗೆಗೆ ಪಾತ್ರರಾದರು. ಇದರಿಂದ ರಂಗಪ್ಪನಾಯಕನು 'ದೇವಣ್ಣ' ಮತ್ತು 'ಸಿರಿಯಪ್ಪ' ಎಂಬುವರ ನೆನಪಿನ ಸ್ಮಾರಕವಾಗಿ ಆ ಪಟ್ಟಣಕ್ಕೆ 'ಸಿರಿಯಾ' ಎಂದು ಹೆಸರಿಟ್ಟನು. ಮುಂದೆ 'ಸಿರಿಯಾ'ವು 'ಸಿರಾ' ಎಂಬುದಾಗಿ ಪ್ರಚಲಿತವಾಯಿತು.

ಕ್ರಿ.ಶ.೧೫೬೫ರ ನಂತರ ಬಿಜಾಪುರ ಮತ್ತು ಗೋಲ್ಕಂಡ ಸುಲ್ತಾನರು ತುಂಗಭದ್ರಾ ನದಿಯ ದಕ್ಷಿಣ ಭೂ ಪ್ರದೇಶಗಳ ಮೇಲೆ ದಾಳಿ ನಡೆಸತೊಡಗಿದರು. ಇವರು ಕೆಳದಿ, ಮೈಸೂರು, ಬಸವಾ ಪಟ್ಟಣಗಳ ಮೇಲೆ ಆಕ್ರಮಣ ಮಾಡಿದ ನಂತರ ಕರ್ನಾಟಕ-ಬಿಜಾಪುರ-ಬಾಲ್ಘಾಟ್‌ಗಳಲ್ಲಿ ಆಯಕಟ್ಟಿನ ಪ್ರದೇಶವಾದ ಸಿರಾದ ಮೇಲೆ ಆಕ್ರಮಣ ನಡೆಸಿದರು. ಈ ವೇಳೆಗಾಗಲೇ ಸಿರಾದಲ್ಲಿ ಪಾಳೆಯಗಾರರು ಸ್ವತಂತ್ರರಾಗಿ ಆಳ್ವಿಕೆ ನಡೆಸುತ್ತಿದ್ದರು. ಇಂಥಹ ಸಂದರ್ಭದಲ್ಲಿ ಬಿಜಾಪುರದ ಆದಿಲ್‌ಷಾಹಿಗಳು ತಮ್ಮ ಇಸ್ಲಾಂ ಧರ್ಮದ ಪ್ರಚಾರ ಮಾಡುವ ಉದ್ದೇಶದಿಂದಲೋ ಅಥವಾ ಇಲ್ಲಿನ ಸಂಪತ್ತನ್ನು ಸೂರೆಗೊಂಡು ಬಲಿಷ್ಟ ಮುಸ್ಲಿಮ್ ಸಾಮ್ರಾಜ್ಯ ಕಟ್ಟುವ ಕಲ್ಪನೆಯಿಂದಲೋ, ಅಥವಾ ತಮ್ಮ ಸಾಮ್ರಾಜ್ಯದ ಆಂತರಿಕ ಸಮಸ್ಯೆ ಈಡೇರಿಕೆಯ ಉದ್ದೇಶವನ್ನಿಟ್ಟುಕೊಂಡೋ ದಕ್ಷಿಣದತ್ತ ಸಾಮ್ರಾಜ್ಯ ವಿಸ್ತರಣಾ ನೀತಿಯನ್ನು ಕೈಗೊಂಡಿರಬಹುದು. ಹೀಗಾಗಿ ಏರು ಮುಖವಾಗಿದ್ದ ರತ್ನಗಿರಿಯ(ಸಿರಾ) ಪ್ರಗತಿಗೆ ದೊಡ್ಡ ಹೊಡೆತ ಬಿದ್ದಿತು ಎಂದು ಹೇಳಬಹುದು.

ಬಿಜಾಪುರ ಸುಲ್ತಾನ ಮಹಮದ್ ಆದಿಲ್‌ಷಾಹನು ಸಿರಾ ಪ್ರದೇಶವನ್ನು ಕ್ರಿ.ಶ.೧೬೩೮ರಲ್ಲಿ ತನ್ನ ಅಧೀನಕ್ಕೆ ತೆಗೆದುಕೊಂಡನು. ನಂತರ ಈ ಪ್ರದೇಶಕ್ಕೆ ತನ್ನ ಅಧೀನದಲ್ಲಿ ಸಹದಂಡನಾಯಕನಾಗಿ ಕಾರ್ಯನಿರ್ವಹಿಸುತ್ತಿದ್ದ ಮಲ್ಲಿಕ್ ರಿಹಾನನ್ನು ಸುಬೇದಾರನಾಗಿ ನೇಮಿಸಿದನು. ಈತನ ಕಾಲದಲ್ಲಿ ಸಿರಾವು ಪ್ರಗತಿ ಹೊಂದಿತು. ಮಲ್ಲಿಕ್ ರಿಹಾನನು ಸದಾ ಕಾಲ ತನ್ನ ವಿರುದ್ಧ ದಂಗೆಯೆದ್ದು ಪಿತೂರಿ ಮಾಡುತ್ತಿದ್ದ ನಾಯಕರು ಮತ್ತು ಪಾಳೆಯಗಾರರನ್ನು ಪರಸ್ಪರ ಎತ್ತಿಕಟ್ಟುವುದರ ಮೂಲಕ ಬಗ್ಗುಬಡಿದು,

ಅವರನ್ನು ತನ್ನ ಹತೋಟಿಗೆ ತೆಗೆದುಕೊಳ್ಳುವಲ್ಲಿ ಸಫಲನಾದನು. ಮಲ್ಲಿಕ್ ರಿಹಾನನು ಇಕ್ಕೇರಿ ಮತ್ತು ಬಸವಾಪಟ್ಟಣವನ್ನು ಆಕ್ರಮಿಸಿಕೊಂಡು, ಮೈಸೂರಿನ ಕಂಠೀರವ ನರಸಿಂಹರಾಜರೊಂದಿಗೆ ಒಪ್ಪಂದ ಮಾಡಿಕೊಳ್ಳುವುದರ ಮೂಲಕ ತನ್ನ ಅಸ್ತಿತ್ವವನ್ನು ಉಳಿಸಿಕೊಂಡನು. ನಂತರದ ದಿನಗಳಲ್ಲಿ ಅನೇಕ ಕಾರಣಗಳಿಂದ ಆದಿಲ್‌ಷಾಹನ ವಿರುದ್ಧ ಮಲ್ಲಿಕ್ ರಿಹಾನನು ದಂಗೆಯೆದ್ದು, ಆತನ ಕೈವಶವಾಗದೆ ಕ್ರಿ.ಶ.೧೬೫೧ರಲ್ಲಿ ಮರಣ ಹೊಂದಿದನು. ಸಿರಾದಲ್ಲಿ 'ಮಲ್ಲಿಕ್ ರಿಹಾನ್ ದರ್ಗಾ'ವನ್ನು ನಿರ್ಮಿಸಿದ್ದು, ಇದು ಈತನ ಕಲಾ ಪ್ರೋತ್ಸಾಹಕ್ಕೆ ಸಾಕ್ಷಿಯಾಗಿದೆ. ಅಲ್ಲದೆ ಈ ದರ್ಗಾ ಉಭಯ ಧರ್ಮಗಳ ಧಾರ್ಮಿಕ ಸಮನ್ವಯದ ಸಂಕೇತವಾಗಿತ್ತು ಎಂಬುದು ಇಂದು ಅಲ್ಲಿಯ ಧಾರ್ಮಿಕ ಆಚರಣೆಯಿಂದ ತಿಳಿದುಬರುತ್ತದೆ.

ಒಟ್ಟಾರೆ ಬಿಜಾಪುರ ಸುಲ್ತಾನನು ದಕ್ಷಿಣ ರಾಜ್ಯಗಳಲ್ಲಿ ಇಸ್ಲಾಂ ಮತವನ್ನು ಹರಡುವ ಹಾಗೂ ಬಲಪಡಿಸುವ ಅತ್ಯಾಕಾಂಕ್ಷೆಯಿಂದ ಕರ್ನಾಟಕದ ಮಲೆನಾಡು ಪ್ರದೇಶಗಳನ್ನು ತನ್ನ ಅಧೀನದಲ್ಲಿಟ್ಟುಕೊಳ್ಳಲು ಯೋಚಿಸಿದ್ದನು ಎನ್ನಬಹುದು. ಆದರೆ ಈ ಮಾತು ಸಂಪೂರ್ಣ ನಿಜವಲ್ಲ. ಏಕೆಂದರೆ ಬಿಜಾಪುರ ಸೈನ್ಯದಲ್ಲಿ ಷಹಜಿ, ವೇದೋಜಿ, ಹನುಮಪ್ಪನಾಯಕ, ರಾಘವಪಂಡಿತ ಇನ್ನಿತರ ಹಿಂದೂಗಳು ಅಧಿಕಾರದಲ್ಲಿದ್ದರು. ಸುಲ್ತಾನನು ಮತಾಂಧ ಭಾವನೆ ಹೊಂದಿದ್ದರೆ ದೂರ ಪ್ರದೇಶದ ಮೇಲೆ ಇಂಥ ಕಾರ್ಯಚರಣೆ ಬಹುಶಃ ಸಾಧ್ಯವಾಗುತ್ತಿರಲಿಲ್ಲ ಎನ್ನಬಹುದು. ಒಟ್ಟಾರೆ ದಕ್ಷಿಣ ಕರ್ನಾಟಕ ಪ್ರದೇಶದ ಪಾಳೆಯಗಾರರ ಮೇಲೆ ನಡೆಸಿದ ಅನೇಕ ಯುದ್ಧಗಳಿಂದ ತಿಳಿದುಬರುವ ಅಂಶವೆಂದರೆ ಸುಲ್ತಾನನು ಇಸ್ಲಾಂ ಮತ ಪ್ರಚಾರಕ್ಕಿಂತ ಕೊಳ್ಳೆ ಹೊಡೆಯುವುದಕ್ಕೆ ಹೆಚ್ಚು ಗಮನ ಕೊಟ್ಟಿದ್ದನು ಎಂಬುವುದರಲ್ಲಿ ಸಂದೇಹವಿಲ್ಲ. ಇದರ ಜೊತೆಗೆ ಸುಲ್ತಾನರು ಸಾಧ್ಯವಾದಷ್ಟು ಕರ್ನಾಟಕದ ಬಹು ಭಾಗಗಳನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳುವುದಕ್ಕೆ ಆಸೆ ಪಟ್ಟಿರಬಹುದು ಎಂದು ಊಹಿಸಬಹುದು.

ಮೊಗಲ್ ಸಾಮ್ರಾಟನಾದ ಔರಂಗಜೇಬನ ಅಧೀನದಲ್ಲಿ ಸಿರಾದ ನವಾಬರಾಗಿ ಕಾರ್ಯ ನಿರ್ವಹಿಸಿದವರಲ್ಲಿ ಖಾಸಿಂಖಾನ್, ಜುಲ್ಫಿಕರ್‌ಖಾನ್, ಫಡದುಲ್ಲಾಖಾನ್, ಅಬ್ದುಲ್-ನಭೀ-ತಾಹರ್ ಖಾನ್ ಮತ್ತು ದಿಲಾವರ್ ಖಾನ್ ಪ್ರಮುಖರು. ಇವರು ಬೆಂಗಳೂರು, ಹೊಸಕೋಟೆ, ದೊಡ್ಡಬಳ್ಳಾಪುರ ಕೋಲಾರ, ಬಸವಾಪಟ್ಟಣ, ಬೂದಿಹಾಳು ಮತ್ತು ಸಿರಾ ಪ್ರದೇಶವನ್ನೊಳಗೊಂಡ ಸಪ್ತ ಪರಗಣ ವಿಶಾಲ ಭೂ ಪ್ರದೇಶದಲ್ಲಿ 'ಸಿರಾ'ವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸತೊಡಗಿದರು.

ಇವರು ವ್ಯವಸ್ಥಿತವಾದ ಸೈನ್ಯವನ್ನು ಬಳಸಿಕೊಂಡು ಸುತ್ತ-ಮುತ್ತಲಿನ ಪಾಳೆಯಗಾರರನ್ನು ತಮ್ಮ ಹತೋಟಿಗೆ ತೆಗೆದುಕೊಳ್ಳುವಲ್ಲಿ ಯಶಸ್ವಿಯಾದರು. ಇವರು ಪೊಗದಿ, ಪಗೋಡ ಮತ್ತು ಜಹಗೀರು ಪ್ರದೇಶಗಳನ್ನು ಕಪ್ಪಕಾಣಿಕೆಯಾಗಿ ಪಡೆಯುವುದರ ಮೂಲಕ ಕೇಂದ್ರದ ಆದಾಯ ಮತ್ತು ಗೌರವವನ್ನು ಹೆಚ್ಚಿಸುತ್ತಿದ್ದರು. ಅಲ್ಲದೆ ತಾವು ಆಳ್ವಿಕೆ ನಡೆಸುತ್ತಿದ್ದ ಪ್ರದೇಶಗಳಲ್ಲಿ ಕೃಷಿಗೆ ಪ್ರೋತ್ಸಾಹ ನೀಡಲು ಕೆರೆ ಕಟ್ಟೆಗಳನ್ನು, ಹುಲ್ಲುಗಾವಲುಗಳನ್ನು ನಿರ್ಮಿಸಿ ಬಂಜರು ಭೂಮಿಗಳನ್ನು ಕೃಷಿಗೆ ಒಳಪಡಿಸುತ್ತಿದ್ದರು. ದಿಲಾವರ್‌ಖಾನನು ಸಿರಾದಲ್ಲಿ ಒಂದು ಕೆರೆಯನ್ನು ಕಟ್ಟಿಸಿದನು. ಖಾಸಿಂಖಾನನ ಅವಧಿಯಲ್ಲಿ ಬೇಡರು

ಮತ್ತು ಒಕ್ಕಲಿಗರು ಕೃಷಿಯನ್ನು ಅವಲಂಬಿಸಿದ್ದರು. ಟಿಪ್ಪು ಸುಲ್ತಾನನು ೭೦೦ ಪಗೋಡಗಳನ್ನು ಖರ್ಚು ಮಾಡಿ ಹಳೆಯ ಕೆರೆಯೊಂದನ್ನು ದುರಸ್ತಿ ಮಾಡಿಸಿದನು. ಹೀಗೆ ನವಾಬರು ಭೂದಾನ ಮತ್ತು ಜಹಗೀರು ಭೂಮಿಗಳನ್ನು ನೀಡುವುದರ ಮೂಲಕ ವ್ಯವಸಾಯಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿ ತೆರಿಗೆಯನ್ನು ಕಂದಾಯದ ರೂಪದಲ್ಲಿ ಸಂಗ್ರಹಿಸುತ್ತಿದ್ದರು.

ಪ್ರಸ್ತುತ ಅಧ್ಯಯನದಲ್ಲಿ ನವಾಬರ ಕಾಲದ ಸಾಂಸ್ಕೃತಿಕ ಅಂಶಗಳನ್ನು ಕಂಡುಕೊಳ್ಳಲಾಗಿದೆ. ಇವರು ಮಲ್ಲಿಕ್ ರಿಹಾನ್ ದರ್ಗಾ, ಜಾಮಿಯಾ ಮಸೀದಿ, ಮೊಗಲ್ ಮಸ್ಜೀದ್, ಚಿನ್ನದ ಗೋರಿ ಹೆರಾರ್ ಮಸೀದಿ, ಈದ್ಗಾ ಮೊದಲಾದ ಮುಸ್ಲಿಮ್ ಸ್ಮಾರಕಗಳನ್ನು ನಿರ್ಮಾಣ ಮಾಡಿದರು. ಅದೇ ರೀತಿ ಸೀಬಿಯ ನರಸಿಂಹಸ್ವಾಮಿ ದೇವಾಲಯ, ಗೋಪಾಲಕೃಷ್ಣಸ್ವಾಮಿ ದೇವಾಲಯ ಮತ್ತು ರಂಗನಾಥಸ್ವಾಮಿ ದೇವಾಲಯಗಳ ನಿರ್ಮಾಣಕ್ಕೆ ದಾನ ನೀಡುವುದರ ಮೂಲಕ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಹೀಗೆ ನವಾಬರ ಆಳ್ವಿಕೆಯ ಅವಧಿಯಲ್ಲಿ ನಿರ್ಮಾಣಗೊಂಡಿರುವ ದೇವಾಲಯಗಳು ಸ್ಮಾರಕಗಳು, ಕೋಟೆ-ಕೊತ್ತಲಗಳ ವಿವರಣೆ ನೀಡಲಾಗಿದೆ. ಬಿಜಾಪುರದ ಸುಲ್ತಾನರು, ಔರಂಗಜೇಬನ ಅಧೀನರಾಗಿ ಕಾರ್ಯನಿರ್ವಹಿಸಿದ ನವಾಬರು, ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಮತ್ತು ಮೈಸೂರು ಅರಸರು ಈ ಸಿರಾ ನಗರವನ್ನು ಪೋಷಿಸಿ ಬೆಳೆಸುವಲ್ಲಿ ಪ್ರಮುಖ ಪಾತ್ರವಹಿಸಿದರು. ತುಮಕೂರು ಜಿಲ್ಲೆಯ ಮಹಮದೀಯ ಸಂಸ್ಕೃತಿಯ ವಾಸ್ತುಶಿಲ್ಪ, ಮಸೀದಿ, ಗೋರಿಗಳು, ಮಹಲ್‌ಗಳನ್ನು ಅಧ್ಯಯನ ಮಾಡುವಾಗ ಅಗತ್ಯವಾಗಿ ಕೈಗೆತ್ತಿಕೊಂಡಿರುವುದು ಸಿರಾದ ಚಾರಿತ್ರಿಕ ಹಿನ್ನೆಲೆ ಮತ್ತು ಧಾರ್ಮಿಕ ಸಾಂಸ್ಕೃತಿಕ ಅಂಶವನ್ನು ಎಂಬುದು ಗಮನಾರ್ಹ ಸಂಗತಿ.

ಸಿರಾ ಭೂ ಪ್ರದೇಶದಲ್ಲಿರುವ ಶಾಸನಗಳು ಮತ್ತು ಸ್ಮಾರಕಗಳನ್ನು ಸಂರಕ್ಷಿಸುವ ಜವಾಬ್ದಾರಿ ಬಾಗಶಃ ಇಲ್ಲಿಯ ಜನತೆಯ ಮೇಲಿದೆ. ಅಲ್ಲಿ ಅವನತಿಯ ಅಂಚಿನಲ್ಲಿರುವ ಸ್ಮಾರಕಗಳನ್ನು ಮತ್ತೆ ಪುನರ್ ರಚಿಸಿ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಚಾಲನೆ ನೀಡಬಹುದು. ನಶಿಸಿ ಹೋಗುತ್ತಿರುವ ಅವುಗಳನ್ನು ಸಂರಕ್ಷಿಸಿ ಮುಂದಿನ ಪೀಳಿಗೆಗೆ ಉಳಿಸಬಹುದಾಗಿದೆ. ಸಿರಾ ಪರಿಸರದ ಶಾಲಾ ಕಾಲೇಜುಗಳು ಇಲ್ಲಿನ ಸಂಸ್ಕೃತಿ ಮತ್ತು ಸ್ಮಾರಕಗಳ ಬಗ್ಗೆ ತಿಳುವಳಿಕೆ ನೀಡುವ ಮಾಧ್ಯಮಗಳಾಗಬೇಕು. ಈ ಸ್ಮಾರಕಗಳ ಬಗ್ಗೆ ಜನಸಾಮಾನ್ಯರಲ್ಲಿ ಅರಿವು ಮೂಡದೆ ಇರುವುದರಿಂದ ತನ್ನ ನೈಜತೆಯನ್ನು ಕಳೆದುಕೊಂಡು ಹಾಳಾಗುತ್ತಿವೆ. ಇವುಗಳ ಬಗ್ಗೆ ಎಚ್ಚರ ವಹಿಸಿದರೆ ಈ ಸೌಂದರ್ಯ ಇನ್ನಷ್ಟು ಕಾಲ ನಮ್ಮ ಪೀಳಿಗೆಗೆ ಲಭ್ಯವಾಗುತ್ತದೆ. ಸರ್ಕಾರದ ಪುರಾತತ್ವ ಇಲಾಖೆಯು ಸಹ ಇದರ ಬಗ್ಗೆ ಇನ್ನೂ ಹೆಚ್ಚು ಗಮನ ಹರಿಸಿದಲ್ಲಿ ಇದರ ಸಂರಕ್ಷಣೆ ಸಾಧ್ಯ.

# ಆಕರ ಸಾಮಗ್ರಿಗಳು

## I. ಪರಾಮರ್ಶನ ಗ್ರಂಥಗಳು


೧. ಅರುಣಿ ಎಸ್.ಕೆ., **ದಖನಿ ಚಿತ್ರಕಲೆ,** ಬೆಂಗಳೂರು; ಕರ್ನಾಟಕ ಲಲಿತಾ ಕಲಾ ಅಕಾಡೆಮಿ, ೨೦೦೧

೨. ಅಭಿಶಂಕರ್ ಕೆ., (ಪ್ರ.ಸಂ), **ಮೈಸೂರ್ ಸ್ಟೇಟ್ ಗ್ಯಾಸೆಟಿಯರ್ ತುಮಕೂರು ಡಿಸ್ಟ್ರಿಕ್ಟ್,** ಬೆಂಗಳೂರು; ಕರ್ನಾಟಕ ಸರ್ಕಾರ, ೧೯೬೯

೩. ಅಣ್ಣಿಗೇರಿ ಎ.ಎಂ., **ಬಿಜಾಪುರ ಶಿಲ್ಪಕಲಾ ವೈಭವ,** ಧಾರವಾಡ; ಭವಾನೀ ಪ್ರಕಾಶನ, ೧೯೮೦

೪. ಕಲಬುರ್ಗಿ ಎಂ.ಎಂ.,(ಸಂ), **ಕರ್ನಾಟಕದ ಕೈಫಿಯತ್ತುಗಳು,** ಹಂಪಿ; ಕನ್ನಡ ವಿಶ್ವವಿದ್ಯಾಲಯ, ೧೯೯೪

೫. ಕಲಬುರ್ಗಿ ಎಂ.ಎಂ. ರಾಮಭಟ್ಟ ಬಿ.ಎಸ್.,(ಸಂ), **ಕೆಳದಿ ಸಂಸ್ಥಾನ ಸಮಗ್ರ ಅಧ್ಯಯನ,** ಆನಂದಪುರ; ಶ್ರೀ ಮುರುಘ ರಾಜೇಂದ್ರಮಠ, ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ೧೯೯೪

೬. ಕಲ್ಲಾಪುರ ಜೆ.ವಿ., 'ಕೆಳದಿ ಇತಿಹಾಸದಲ್ಲಿ ಮೈಸೂರರಸರು', (**ಇತಿಹಾಸ ದರ್ಶನ** ೯, ಸಂ: ಸೂರ್ಯನಾಥ ಕಾಮತ್ ಯು. ದೇವರ ಕೊಂಡಾರೆಡ್ಡಿ), ಬೆಂಗಳೂರು; ಕರ್ನಾಟಕ ಇತಿಹಾಸ ಅಕಾಡೆಮಿ, ೧೯೯೪

೭. ಕುಲಕರ್ಣಿ ಜಿ.ಟಿ., **ದಿ ಮೊಗಲ್-ಮರಾಠ ರಿಲೇಷನ್ಸ್ : ಟ್ವನ್ಟಿ ಫೈವ್ ಫೇಟ್ ಫುಲ್ ಇಯರ್ಸ್ (೧೬೮೨-೧೭೦೭),** ಪುಣೆ; ಡೆಕ್ಕನ್ ಕಾಲೇಜ್, ೧೯೮೩

೮. ಕೃಷ್ಣ ಕೊಲ್ಹಾರ ಕುಲಕರ್ಣಿ., **ಬಿಜಾಪುರ ಆದಿಲ್ ಶಾಹಿ,** ಬಿಜಾಪುರ; ಸಿಕ್ಯಾಬ ಆದಿಲ್ ಶಾಹಿ ಅಧ್ಯಯನ ಸಂಸ್ಥೆ, ೨೦೦೨

೯. ಕೃಷ್ಣರಾವ್ ಎಂ.ವಿ. ಕೇಶವಭಟ್ಟ ಎಂ.,(ಸಂ), **ಕರ್ನಾಟಕ ಇತಿಹಾಸ ದರ್ಶನ,** ಬೆಂಗಳೂರು; ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ, ೧೯೭೦

೧೦. ಕೊರಟಿ ಶ್ರೀನಿವಾಸರಾವ್., **ಇರಾವತಿ,** ಬೆಂಗಳೂರು; ಆನಂದ ನಿಲಯ ಪ್ರಕಾಶನ, ೧೯೭೭

೧೧. ಕೊರಟಿ ಶ್ರೀನಿವಾಸರಾವ್., **ಬೆಂಗಳೂರಿನ ಭಾಗ್ಯ,** ಬೆಂಗಳೂರು; ಆನಂದ ನಿಲಯ ಪ್ರಕಾಶನ, ೧೯೭೭

೧೨. ತಿಪ್ಪೇರುದ್ರಸ್ವಾಮಿ ಎಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಮೈಸೂರು; ಡಿ.ವಿ.ಕೆ. ಮೂರ್ತಿ ಪ್ರಕಾಶನ, ೨೦೦೧

೧೩. ದೀಕ್ಷಿತ್ ಜಿ.ಎಸ್., 'ದೊಡ್ಡೇರಿ ಕಾಳಗ', (**ಶ್ರೀಕಂಠ ತೀರ್ಥ**, ಸಂ: ಚಿದಾನಂದಮೂರ್ತಿ ಎಂ., ಮತ್ತಿತರು) ಬೆಂಗಳೂರು; ತೀ.ನಂ.ಶ್ರೀ, ಸಂಸಾರವರ್ಗ, ೧೯೭೬

೧೪. ದಿವಾಕರ ರಂ.ರಾ.,(ಸಂ), **ಕರ್ನಾಟಕ ಪರಂಪರೆ ಸಂಪುಟ-೨**, ಬೆಂಗಳೂರು; ಸಾಹಿತ್ಯ ಸಂಸ್ಕೃತಿ ಇಲಾಖೆ, ಮೈಸೂರು ಸರ್ಕಾರ, ೧೯೭೦

೧೫. ನರಸಿಂಹನ್ ಅ.ಲ., **ಕರ್ನಾಟಕ ಭಿತ್ತಿಚಿತ್ರ ಪರಂಪರೆ**, ಬೆಂಗಳೂರು; ಕರ್ನಾಟಕ ಲಲಿತಾ ಕಲಾ ಅಕಾಡೆಮಿ, ೧೯೯೮

೧೬. ನಾಯಕ ಹಾ.ಮಾ.,(ಪ್ರ.ಸಂ), **ಕನ್ನಡ ವಿಷಯ ವಿಶ್ವಕೋಶ**, ಮೈಸೂರು; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೯

೧೭. ಪುಟ್ಟಣ್ಣ ಎಂ.ಎಸ್., **ಚಿತ್ರದುರ್ಗದ ಪಾಳೆಯಗಾರರು**, ಚಿತ್ರದುರ್ಗ; ಟಿ.ಎಸ್.ಗಂಡುಗಲಿ ಪ್ರಕಾಶನ, ೧೯೯೭

೧೮. ಭಾಸ್ಕರಪ್ಪ ಸಿ.ಎನ್.,(ಸಂ), **ತುಮಕೂರು ಜಿಲ್ಲಾ ದರ್ಶನ**, ತುಮಕೂರು; ಟೈಮ್ಸ್ ಪಬ್ಲಿಕೇಷನ್ಸ್, ೧೯೮೧

೧೯. ಮಹಮದ್ ಇಬ್ರಾಹಿಂ ಜುಬೇರಿ., **ಬಸಾತಿನ ಸಲಾತೀನ್**(ಅನು : ಕೃಷ್ಣ ಕೊಲ್ಹಾರ ಕುಲಕರ್ಣಿ) ಹಂಪಿ; ಕನ್ನಡ ವಿಶ್ವವಿದ್ಯಾಲಯ, ೧೯೯೯

೨೦. ಮುದ್ದಾಚಾರಿ ಬಿ., **ಮೈಸೂರು-ಮರಾಠರ ಬಾಂಧವ್ಯ**, ಮೈಸೂರು; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೫೦

೨೧. ಮುದ್ದಾಚಾರಿ ಬಿ., **ದಿ ಮೈಸೂರು-ಮರಾಠ ರಿಲೇಷನ್ಸ್ ಇನ್ ದಿ ಸೆವೆನ್‌ಟೀನ್ತ್ ಸೆಂಚುರಿ**, ಮೈಸೂರು; ಯೂನಿವರ್ಸಿಟಿ ಆಫ್ ಮೈಸೂರು, ೧೯೬೯

೨೨. ಮೊಹಿಬ್ಬುಲ್ ಹಸನ್., **ಟಿಪ್ಪು ಸುಲ್ತಾನನ ಇತಿಹಾಸ** (ಅನು : ಸಮೇತನಹಳ್ಳಿ ರಾಮರಾಯ), ಮೈಸೂರು; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೮

೨೩. ಯಾಸೀನ್ ಖುದ್ದೋಸಿ. ಸೀತಾರಾಮ ಜಾಗೀರ್ ದಾರ್.,(ಸಂ), **ಕರ್ನಾಟಕ ಪರ್ಶಿಯನ್ ಅರಾಬಿಕ್ ಮತ್ತು ಉರ್ದು ಶಾಸನಗಳು**, ಹಂಪಿ; ಕನ್ನಡ ವಿಶ್ವವಿದ್ಯಾಲಯ, ೨೦೦೧

೨೪. ಯೋಗೀಶ್ವರಪ್ಪ ಡಿ.ಎನ್., 'ಸಿರಾದ ನವಾಬರು', (**ಇತಿಹಾಸದರ್ಶನ**, ಸಂಪುಟ-೧೩, ಸಂ. ನಾಗರಾಜ್ ಎಂ.ಜಿ. ಕೃಷ್ಣಮೂರ್ತಿ ಡಿ.ವಿ.), ಬೆಂಗಳೂರು; ಕರ್ನಾಟಕ ಇತಿಹಾಸ ಅಕಾಡೆಮಿ, ೧೯೯೮

೨೫. ಯೋಗೀಶ್ವರಪ್ಪ ಡಿ.ಎನ್., **ಹಾಗಲವಾಡಿ ಪಾಳೆಯಗಾರರು**, ಹಂಪಿ; ಕನ್ನಡ ವಿಶ್ವವಿದ್ಯಾಲಯ, ೨೦೦೧

